# ಹಜ್ ಉಮ್ರಾ

## ಮತ್ತು ಪ್ರವಾದಿ(ﷺ)ರವರ ಮಸೀದಿ ಸಂದರ್ಶನದ ಮಾರ್ಗದರ್ಶಿ

بسم الله الرحمن الرحيم

ಪರಮ ದಯಾಮಯನೂ ಕರುಣಾಮಯಿಯೂ
ಆದ ಅಲ್ಲಾಹನ ನಾಮದಿಂದ

# دَلِيلُ الْحَاجِّ وَالْمُعْتَمِرِ وَزَائِرِ مَسْجِدِ الرَّسُولِ صَلَّى اللَّهُ عَلَيْهِ وَسَلَّمَ

# ಹಜ್ಜ್, ಉಮ್ರಾ ಮತ್ತು ಪ್ರವಾದಿ(ﷺ)ರವರ ಮಸೀದಿ ಸಂದರ್ಶನದ ಮಾರ್ಗದರ್ಶಿ

ರಚನೆ:

**ಹೈಅತು ತ್ತೌಇಯತಿಲ್ ಇಸ್ಲಾಮಿಯ್ಯತಿ ಫಿಲ್ ಹಜ್ಜ್**

ಅವಲಂಬನೆ:

**ಅಲ್ಲಜ್ನತು ದ್ದಾಇಮಃ ಲಿಲ್ ಬುಹೂಸಿಲ್ ಇಲ್ಮಿಯ್ಯತಿ ವಲ್ ಇಫ್ತಾಅ್**

ಮತ್ತು

**ಸಮಾಹತು ಶ್ಯೈಖ್ ಮುಹಮ್ಮದ್ ಇಬ್ನ್ ಸಾಲಿಹ್ ಅಲ್ ಉಸೈಮೀನ್(ﷺ)**


ಪ್ರಕಟಣೆ:

**ವಝಾರತು ಶ್ಯುಊನಿಲ್ ಇಸ್ಲಾಮಿಯ್ಯತಿ ವಲ್ ಔಕಾಫಿ ವದ್ದಅ್ವತಿ ವಲ್ ಇರ್ಶಾದ್**

**ಅಲ್ ಮಮ್ಲುಕತುಲ್ ಅರಬಿಯ್ಯತಿ ಸ್ಸಊದಿಯ್ಯಃ (ಸೌದಿ ಅರೇಬಿಯಾ)**

Title: Haj Umra mathu pravadi(ﷺ)ravara Maseedi sandarshanada Margadarshi
Prepared by: Hay'ah atThaw'iyyatul Islamiyya fil Hajj
Translator: Muhammad Hamza Puttur
Copies: 2000
Typesetting & DTP: IMAGE PUBLICATIONS

*Publisher:*

Manhaj-Al-Ambiya
Call & Guidance Centre
Kuwait
*email: al.ambiya@gmail.com*
*dawathu-salafiyya@hotmail.com*

*Sponsored by*

جمعية إحياء التراث الإسلامي الكويت

**REVIVAL OF ISLAMIC HERITAGE SOCIETY KUWAIT**

# كلمة الناشر

بسم الله الرحمن الرحيم

الحمد لله رب العالمين والصلاة والسلام على أشرف الأنبياء والمرسلين وعلى آله وصحبه أجمعين أما بعد:

الحج ركن خامس من أركان الإسلام التي فرضها الله على عباده المؤمنين. وواجب على كل مسلم يريد أداء فريضة الحج - ويريد العمرة كذلك - أن يتعلم أحكامهما بشكل صحيح حتى يؤدي هذه الفريضة على الوجه الأكمل الذي يحبه الله ويرضاه.

إن المصنفات التي توجد في لغتنا المحلية حول هذا الموضوع أكثرها من قبل العلماء المبتدعة. لهذا نجد أكثر صفحاتها مسودة بالأذكار والأدعية الشركية والبدعية فضلا عن الأحكام والإرشادات فيها .

لهذا وقع الاختيار منا ترجمة وطباعة هذا الكتاب الرائع المسمي بـ «دليل الحاج والمعتمر وزائر مسجد الرسول صلى الله عليه وآله وسلم» الذي أعدته هيئة التوعية في الحج باللغة الإنجليزية معتمدة على فتاوى اللجنة الدائمة للبحوث العلمية والإفتاء وفتاوى سماحة الشيخ محمد بن صالح العثيمين رحمه الله تعالى ونشرته وزارة الشؤون الإسلامية والأوقاف والدعوة والإرشاد بالمملكة العربية السعودية .

ونسأل الله أن يجعله في ميزان حسنات المصنف والمترجم وأن ينفع بها المسلمين وأن يضاعف الأجر لكل من سعى في نشرها وإيصالها إلى من يستفيد منها إنه سبحانه جواد كريم .

وصلى الله تعالى على نبينا محمد وآله وصحبه وسلم

الناشرون

# ಒಳಪುಟಗಳಲ್ಲಿ....

بسم الله الرحمن الرحيم

الحمد لله وحده والصلاة والسلام على من لا نبي بعده وآله وصحبه أجمعين

# ಮುನ್ನುಡಿ

ಅಲ್ಲಾಹುವಿನ ಪವಿತ್ರ ಭವನಕ್ಕೆ ತೆರಳುವ ಯಾತ್ರಾರ್ಥಿಗಳಿಗೆ, ಸಾಮಾನ್ಯವಾಗಿ ಅರಿತಿರಬಹುದಾದ ಹಜ್ ಮತ್ತು ಉಮ್ರಾಗಳ ಕೆಲವು ಅನುಷ್ಠಾನ ಕರ್ಮಗಳನ್ನು ವಿವರಿಸಿಕೊಡುವ ಈ ಸಂಕ್ಷಿಪ್ತವಾದ, ಆದರೂ ಸುಲಭ ಗ್ರಾಹ್ಯವಾದ ಮಾರ್ಗದರ್ಶಿಯನ್ನು ಅರ್ಪಿಸಲಾಗಿದೆ.

﴿ وَتَوَاصَوۡاْ بِٱلۡحَقِّ وَتَوَاصَوۡاْ بِٱلصَّبۡرِ ٣ ﴾

**“ಮತ್ತು ಸತ್ಯದೊಂದಿಗೆ ಪರಸ್ಪರ ಉಪದೇಶ ಮಾಡಿರಿ ಹಾಗೂ ಸಹನೆಯೊಂದಿಗೆ ಪರಸ್ಪರ ಉಪದೇಶ ಮಾಡಿರಿ.”** (ಕುರ್‌ಆನ್ 103/3) ಮತ್ತು...

﴿ وَتَعَاوَنُواْ عَلَى ٱلۡبِرِّ وَٱلتَّقۡوَىٰۖ وَلَا تَعَاوَنُواْ عَلَى ٱلۡإِثۡمِ

وَٱلْعُدْوَٰنِ ﴾

**“ಮತ್ತು ಒಳಿತಿನಲ್ಲಿ ಹಾಗೂ ದೇವನಿಷ್ಠೆಯಲ್ಲಿ ಪರಸ್ಪರ ನೆರವಾಗಿರಿ. ಆದರೆ ಪಾಪ ಮತ್ತು ಅತಿಕ್ರಮದಲ್ಲಿ ಪರಸ್ಪರ ನೆರವಾಗದಿರಿ.”** (ಕುರ್‌ಆನ್ 5/2) ಎಂದು ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಮೋಕ್ಷ ಮತ್ತು ಯಶಸ್ಸನ್ನು ಗಳಿಸುವಂತಹ ತನ್ನ ದಾಸರ ಕುರಿತು ಅಲ್ಲಾಹು ಹೇಳಿರುವ (ಮೇಲಿನ) ವಚನಗಳಿಗೆ ಅನುಸಾರವಾಗಿ ಮೊಟ್ಟಮೊದಲು ನಮಗೆ, ತರುವಾಯ ನಿಮಗೆ ಕೆಲವು ಸಲಹೆ ಸೂಚನೆಗಳನ್ನು ನೀಡುವ ಮೂಲಕ ನಾವಿದನ್ನು ಆರಂಭಿಸುತ್ತಿರುವೆವು.

ತಾನು ಏನು ಮಾಡುತ್ತಿದ್ದೇನೆ ಎಂಬ ಪ್ರಜ್ಞೆಯಿರುವವನಾಗಿರುವ ಸಲುವಾಗಿ ಹಜ್‌ನ ಅನುಷ್ಠಾನ ಕರ್ಮಗಳನ್ನು ಪ್ರಾರಂಭಿಸುವ ಮೊದಲು ಈ ಪುಸ್ತಿಕೆಯನ್ನು ತಾವು ಓದುವಿರಿ ಎಂದು ಆಶಿಸುವೆವು.

ನಮ್ಮ ಹಜ್, ಪರಿಶ್ರಮ ಹಾಗೂ ಇತರೆಲ್ಲ ಸತ್ಕರ್ಮಗಳನ್ನು ನಮ್ಮೆಲ್ಲರಿಂದಲೂ ಸ್ವೀಕರಿಸಲು ನಾವು ಅಲ್ಲಾಹುವಿನೊಂದಿಗೆ ಪ್ರಾರ್ಥಿಸುತ್ತಿರುವೆವು.

# ಮುಖ್ಯ ಸಲಹೆಗಳು

ಪ್ರಿಯ ಯಾತ್ರಾರ್ಥಿಗಳೇ! ತನ್ನ ಭವನಕ್ಕೆ ಹಜ್ ನಿರ್ವಹಿಸಲು ನಿಮ್ಮನ್ನು ಮುನ್ನಡೆಸಿದ ಅಲ್ಲಾಹುವನ್ನು ನಾವು ಸ್ತುತಿಸುವೆವು. ಅವನು ನಮ್ಮೆಲ್ಲರಿಂದಲೂ ನಮ್ಮ ಸತ್ಕರ್ಮಗಳನ್ನು ಸ್ವೀಕರಿಸಲಿ ಮತ್ತು ನಮಗೂ ನಿಮಗೂ ತನ್ನ ಪ್ರತಿಫಲವನ್ನು ಅಧಿಕವಾಗಿ ದಯಪಾಲಿಸಲಿ.

ಅಲ್ಲಾಹು ನಮ್ಮೆಲ್ಲರಿಂದಲೂ ನಮ್ಮ ಹಜ್ ಮತ್ತು ನಮ್ಮ ಪರಿಶ್ರಮಗಳನ್ನು ಸ್ವೀಕರಿಸುವನು ಎಂಬ ನಿರೀಕ್ಷೆಯೊಂದಿಗೆ ಈ ಕೆಳಗಿನ ಸಲಹೆಗಳನ್ನು ನಿಮಗೆ ನೀಡಲಾಗುತ್ತಿದೆ.

**1.** ನೀವು ಒಂದು ಅನುಗ್ರಹೀತವಾದ ಯಾತ್ರೆಯಲ್ಲಿ, ಅಂದರೆ ಅಲ್ಲಾಹನ ಪ್ರತಿಫಲವನ್ನು ಆಶಿಸುತ್ತಾ, ಅವನ ಸಂದೇಶವಾಹಕರಾದ ಮುಹಮ್ಮದ್(ﷺ) ರವರ ಆಜ್ಞಾಪಾಲನೆ ಮಾಡುತ್ತಾ, ಅಲ್ಲಾಹುವಿನ ಏಕತ್ವ (ತೌಹೀದ್), ಅವನಿಗಿರುವ ನಿಷ್ಕಳಂಕತೆ, ಅವನ ಕರೆಗಿರುವ ಪ್ರತಿಸ್ಪಂದನೆ ಮತ್ತು ಅವನ ಆಜ್ಞೆಗಳಿಗಿರುವ ವಿಧೇಯತೆ ಇತ್ಯಾದಿ ನಂಬಿಕೆಗಳಲ್ಲಿ ಅಧಿಷ್ಠಿತವಾಗಿರುವ ಒಂದು ಯಾತ್ರೆಯಲ್ಲಿರುವಿರಿ ಎಂಬುದನ್ನು ಸ್ಮರಿಸಿರಿ.

ಅಲ್ಲಾಹನಿಂದ ಸ್ವೀಕೃತವಾಗುವ ಹಜ್ಜೊಂದರ ಪ್ರತಿಫಲವು ಸ್ವರ್ಗೋದ್ಯಾನವಾಗಿದೆ ಎಂಬುದನ್ನು ಮರೆಯದಿರಿ.

**2**. ನಿಮ್ಮ ಮಧ್ಯೆ ಭಿನ್ನತೆಯನ್ನುಂಟುಮಾಡಲು ಸದಾ ಹವಣಿಸುತ್ತಿರುವ ಶೈತಾನನ ಕೀಟಲೆಗಳ ಬಗ್ಗೆ ಎಚ್ಚರವಹಿಸಿರಿ. ಯಾಕೆಂದರೆ ಸತ್ಯವಾಗಿಯೂ ಅವನು ನಿಮ್ಮನ್ನು ಹೊಂಚುಹಾಕಿ ಕುಳಿತಿರುವ ನಿಮ್ಮ ಶತ್ರು ವಾಗಿರುವನು. ಆದ್ದರಿಂದ ನೀವು ಪರಸ್ಪರ ಸಹೋದರ ಸಹೋದರಿಯರಂತೆ ಪ್ರೀತಿಸಿರಿ ಮತ್ತು ವಿವಾದಗಳನ್ನು ಹಾಗೂ ಅಲ್ಲಾಹನಿಗಿರುವ ಅವಿಧೇಯತೆಗಳನ್ನು ವರ್ಜಿಸಿರಿ. ಅಲ್ಲಾಹನ ಸಂದೇಶವಾಹಕ(ﷺ)ರವರು ಹೇಳಿದ ಮಾತನ್ನು ಜ್ಞಾಪಿಸಿಕೊಳ್ಳಿರಿ:

«لَا يُؤْمِنُ أَحَدُكُمْ حَتَّى يُحِبَّ لِأَخِيهِ مَا يُحِبُّ لِنَفْسِهِ»

**“ತನಗಾಗಿ ಇಷ್ಟಪಡುವುದೆಲ್ಲವನ್ನೂ ತನ್ನ ಸಹೋದರನಿಗಾಗಿಯೂ ಇಷ್ಟಪಡುವ ತನಕ ನಿಮ್ಮಲ್ಲಿ ಯಾರೊಬ್ಬನೂ ವಿಶ್ವಾಸಿಯಾಗಲಾರನು.”**

**3**. ಧಾರ್ಮಿಕ ವಿಷಯಗಳ ಕುರಿತು ಅಥವಾ

ಹಜ್‌ಗೆ ಸಂಬಂಧಿಸಿದ ವಿಷಯಗಳ ಕುರಿತು ನಿಮಗೆ ಸಂದೇಹಗಳು ಉದ್ಭವಿಸುವಾಗಲೆಲ್ಲ ನಿಮಗೆ ತೃಪ್ತಿಕರವಾದ ಉತ್ತರವು ಸಿಗುವ ವ್ಯಕ್ತಿಯೊಂದಿಗೆ ಕೇಳಿರಿ. ಇದು ಅಲ್ಲಾಹುವಿನ ಈ ವಚನಕ್ಕೆ ಅನುಗುಣವಾಗಿದೆ:

﴿ فَسْـَٔلُوٓا۟ أَهْلَ ٱلذِّكْرِ إِن كُنتُمْ لَا تَعْلَمُونَ ﴿٤٣﴾ ﴾

**"ನಿಮಗೆ ಅರಿವಿಲ್ಲದಿದ್ದರೆ ಅರಿವುಳ್ಳವರೊಂದಿಗೆ ಕೇಳಿರಿ."** (ಕುರ್‌ಆನ್ 16/43)

ಮತ್ತು ಇದು ಪ್ರವಾದಿ(ﷺ)ರವರ ಈ ವಚನಕ್ಕೆ ಅನುಗುಣವಾಗಿದೆ:

«مَنْ يُرِدِ اللَّهُ بِهِ خَيْرًا يُفَقِّهْهُ فِي الدِّينِ»

**"ಯಾರಿಗಾದರೂ ಅಲ್ಲಾಹು ಒಳಿತನ್ನು ಉದ್ದೇಶಿಸಿದರೆ ಅವನಿಗೆ ಧರ್ಮದಲ್ಲಿ ಪಾಂಡಿತ್ಯವನ್ನು ನೀಡುವನು."**

ಅಲ್ಲಾಹು ಕೆಲವು ಕರ್ಮಗಳನ್ನು ಫರ್ದ್ (ಕಡ್ಡಾಯ) ಆಗಿಯೂ ಕೆಲವು ಕರ್ಮಗಳನ್ನು ಸುನ್ನಃ (ಐಚ್ಛಿಕ) ಆಗಿಯೂ ಮಾಡಿರುವನು ಎಂಬುದನ್ನು ಅರಿತುಕೊಳ್ಳಿರಿ. ಫರ್ದ್ (ಕಡ್ಡಾಯ) ಆಗಿರುವ ಕರ್ಮಗಳನ್ನು ಉಲ್ಲಂಘಿಸುವವನ ಸುನ್ನಃ (ಐಚ್ಛಿಕ) ಆಗಿರುವ ಕರ್ಮಗಳನ್ನು

ಅಲ್ಲಾಹು ಸ್ವೀಕರಿಸಲಾರನು. ಕೆಲವು ಯಾತ್ರಾರ್ಥಿಗಳು ಈ ವಾಸ್ತವಿಕತೆಯನ್ನು ನಿರ್ಲಕ್ಷಿಸುತ್ತಾರೆ. ಆದ್ದರಿಂದಲೇ ಅವರು ಹಜರುಲ್ ಅಸ್ವದ್ (ಕಪ್ಪು ಶಿಲೆ)ನ್ನು ಚುಂಬಿಸುವ ಹುರುಪಿನಲ್ಲಿ, ಅಥವಾ ಕಅ್‌ಬಾಕ್ಕೆ ತವಾಫ್ (ಪ್ರದಕ್ಷಿಣೆ) ಮಾಡುವ ಸಂದರ್ಭದಲ್ಲಿ, ಅಥವಾ ಮಕಾಮ್ ಇಬ್ರಾಹೀಮ್‌ನ ಹಿಂದೆ ನಮಾಝ್ ಮಾಡುವುದರಲ್ಲಿ, ಅಥವಾ ಝಂಝಂ ನೀರನ್ನು ಕುಡಿಯುವುದರಲ್ಲಿ ಹಾಗೂ ಮತ್ತಿತರ ಪ್ರವೃತ್ತಿಗಳಲ್ಲಿ ಹಿಂಸಾತ್ಮಕವಾಗಿ ನುಗ್ಗುವ ಮೂಲಕ ವಿಶ್ವಾಸಿಗಳಾದ ಸ್ತ್ರೀ ಪುರುಷರಿಗೆ ತೊಂದರೆ ಕೊಡುವುದನ್ನು ಕಾಣಬಹುದು. ಈ ಪ್ರವೃತ್ತಿಗಳೆಲ್ಲವೂ ಸುನ್ನಃ (ಐಚ್ಛಿಕ) ಆಗಿವೆ. ಆದರೆ ವಿಶ್ವಾಸಿಗಳಿಗೆ ತೊಂದರೆ ಕೊಡುವುದು ಹರಾಮ್ (ನಿಷಿದ್ಧ) ಆಗಿದೆ. ಹರಾಮ್ ಆಗಿರುವ ಒಂದು ಪ್ರವೃತ್ತಿಯನ್ನು ಮಾಡುತ್ತಿರುವಾಗ ತಾವು ಸುನ್ನಃ ಆಗಿರುವ ಒಂದು ಪ್ರವೃತ್ತಿಯನ್ನು ಹೇಗೆ ತಾನೇ ಮಾಡಬಲ್ಲಿರಿ? ಆದ್ದರಿಂದ, ಪರಸ್ಪರ ನೋಯಿಸು ವುದನ್ನು ವರ್ಜಿಸಿರಿ. ಅಲ್ಲಾಹು ತಮ್ಮ ಮೇಲೆ ಕರುಣೆ ತೋರಲಿ ಮತ್ತು ತಮಗೆ ಅಗಾಧವಾದ ಪ್ರತಿಫಲವನ್ನು ದಯಪಾಲಿಸಲಿ.

ಈ ಕೆಳಗಿನ ವಿಷಯಗಳನ್ನು ಕೂಡ ಒತ್ತಿ ಹೇಳಲು

ನಾವು ಇಷ್ಟಪಡುವೆವು.

**ಎ.** ಪವಿತ್ರ ಮಸೀದಿಯಲ್ಲಾಗಲಿ, ಅಥವಾ ಇತರ ಸ್ಥಳಗಳಲ್ಲಾಗಲಿ, ಯಾವುದೇ ಕಾರಣಕ್ಕೂ ಓರ್ವ ಮಹಿಳೆಯ ಬಳಿ ಅಥವಾ ಆಕೆಯ ಹಿಂದೆ ನಮಾಝ್ ಮಾಡುವುದು ಓರ್ವ ಮುಸ್ಲಿಮ್ ಪುರುಷನಿಗೆ ಹೇಳಿಸಿದ್ದಲ್ಲ. ಆದ್ದರಿಂದ ಅದನ್ನು ವರ್ಜಿಸಲು ಸಾಧ್ಯವಿರುವಲ್ಲೆಲ್ಲ ಅದನ್ನು ವರ್ಜಿಸಿರಿ. ವಾಸ್ತವಿಕವಾಗಿ ಮಹಿಳೆಯರು ಪುರುಷರ ಹಿಂದೆ ನಮಾಝ್ ಮಾಡಬೇಕಾಗಿದೆ.

**ಬಿ.** ಹರಮ್‌ನೆಡೆಗಿರುವ ಹಾದಿಗಳಲ್ಲಿ, ಅಥವಾ ದ್ವಾರಗಳಲ್ಲಿ ನಮಾಝ್ ಮಾಡುವುದು ಸರಿಯಲ್ಲ. ಯಾಕೆಂದರೆ ಹಾಗೆ ನಮಾಝ್ ಮಾಡುವುದರಿಂದ ಹರಮ್‌ನೊಳಗೆ ಬರುವ ಜನರಿಗೆ ತೊಂದರೆ ಮತ್ತು ಅಡ್ಡಿಯುಂಟಾಗುತ್ತದೆ.

ಸಿ. ವಿಶೇಷವಾಗಿ ಜನಸಂದಣಿ ಕಿಕ್ಕಿರಿದು ನೆರೆದಿರುವಾಗ, ಕಅ್‌ಬಾದ ಬಳಿ ಕೂರುವ ಮೂಲಕ, ಅಥವಾ ಅದರ ಬಳಿ ನಮಾಝ್ ಮಾಡುವ ಮೂಲಕ, ಅಥವಾ ಹಜರುಲ್ ಅಸ್ವದ್‌ನ ಬಳಿ, ಅಥವಾ ಹಿಜ್ರ್ ಇಸ್ಮಾಈಲ್ ಬಳಿ, ಅಥವಾ ಮಕಾಮ್ ಇಬ್ರಾಹೀಮ್ ಬಳಿ ನಿಲ್ಲುವ ಮೂಲಕ, ಕಅ್‌ಬಾದ ಸುತ್ತಲೂ ತವಾಫ್ ಮಾಡುವ ಜನರ

ಮುಕ್ತ ಪ್ರವಾಹಕ್ಕೆ ತಡೆಯೊಡ್ಡುವುದು ಸಮ್ಮತಾರ್ಹವಲ್ಲ.

**ಡಿ.** ಮುಸ್ಲಿಮರ ಘನತೆಯನ್ನು ಸಂರಕ್ಷಿಸುವುದು ಫರ್ದ್ (ಕಡ್ಡಾಯ) ಆಗಿರುವಾಗ ಹಜರುಲ್ ಅಸ್ವದನ್ನು ಚುಂಬಿಸುವುದು ಸುನ್ನಃ (ಐಚ್ಛಿಕ) ಆಗಿದೆ. ಒಂದು ಸುನ್ನಃಕ್ಕಾಗಿ ಫರ್ದ್ ಆಗಿರುವ ಕಾರ್ಯವನ್ನು ಬಲಿಗೊಡಲು ಸಾಧ್ಯವಿಲ್ಲ. ಆದ್ದರಿಂದ ಸ್ಥಳವು ಜನನಿಬಿಡ ವಾಗಿರುವಾಗ **'ಅಲ್ಲಾಹು ಅಕ್ಬರ್'** ಎನ್ನುತ್ತಾ ಹಜರುಲ್ ಅಸ್ವದ್‌ನೆಡೆಗೆ ಸಂಜ್ಞೆ ಮಾಡಿದರೆ ಸಾಕು. ತವಾಫ್ ಮಾಡುವ ಸ್ಥಳದಿಂದ ನಿರ್ಗಮಿಸುವಾಗ ಶಾಂತವಾಗಿ ನಿರ್ಗಮಿಸಿರಿ.

**ಇ.** ರಕ್ನುಲ್ ಯಮಾನಿಯ ಮೂಲೆಯನ್ನು ತಲುಪುವಾಗ ಅದನ್ನು ಬಲಗೈಯಿಂದ ಮುಟ್ಟಿ **'ಬಿಸ್ಮಿಲ್ಲಾಹಿ ವಲ್ಲಾಹು ಅಕ್ಬರ್'** ಎಂದು ಹೇಳುವುದು ಸುನ್ನಃ ಆಗಿದೆ. ಅದನ್ನು ಚುಂಬಿಸಲು ಶರೀಅತ್ ನಿರ್ದೇಶಿಸಿಲ್ಲ. ತವಾಫ್ ಮಾಡುತ್ತಿರುವ ವ್ಯಕ್ತಿಗೆ ಅದನ್ನು ಮುಟ್ಟುವುದು ಅಸಾಧ್ಯವಾದರೆ, ಅವನು ತನ್ನ ತವಾಫನ್ನು ಮುಂದುವರಿಸಲಿ, ಅವನು ಅದರೆಡೆಗೆ ಸಂಜ್ಞೆ ಮಾಡಬಾರದು, ಅಥವಾ ತಕ್ಬೀರ್ (ಅಲ್ಲಾಹು ಅಕ್ಬರ್) ಹೇಳಲೂಬಾರದು, ಯಾಕೆಂದರೆ ಅದು ಪ್ರವಾದಿ(ﷺ)

ರವರಿಂದ ಅಧಿಕೃತವಾಗಿ ವರದಿಯಾಗಿಲ್ಲ. ರುಕ್ನುಲ್ ಯಮಾನಿಯ ಮೂಲೆ ಮತ್ತು ಹಜರುಲ್ ಅಸ್ವದ್‌ನ ಮಧ್ಯೆ ತಲುಪುವಾಗ ಈ ಕೆಳಗಿನ ಪ್ರಾರ್ಥನೆಯನ್ನು ಹೇಳುವುದು ಮುಸ್ತಹಬ್ಬ್ (ಪ್ರೋತ್ಸಾಹನೀಯ) ಆಗಿದೆ.

﴿ رَبَّنَآ ءَاتِنَا فِى ٱلدُّنْيَا حَسَنَةً وَفِى ٱلْـَٔاخِرَةِ حَسَنَةً وَقِنَا عَذَابَ ٱلنَّارِ ﴿٢٠١﴾ ﴾

**“ರಬ್ಬನಾ ಆತಿನಾ ಫಿದ್ದುನ್ಯಾ ಹಸನತನ್ ವಫಿಲ್ ಆಖಿರತಿ ಹಸನತನ್ ವಕಿನಾ ಅದಾಬನ್ನಾರ್.”**

(ನಮ್ಮ ಪ್ರಭೂ! ನಮಗೆ ಇಹಲೋಕದಲ್ಲಿ ಒಳಿತನ್ನು ದಯಪಾಲಿಸು ಮತ್ತು ಪರಲೋಕದಲ್ಲೂ ಒಳಿತನ್ನು ದಯಪಾಲಿಸು ಮತ್ತು ನಮ್ಮನ್ನು ನರಕ ಶಿಕ್ಷೆಯಿಂದ ಪಾರುಮಾಡು)

ಕೊನೆಯದಾಗಿ, ನಾವು ತಮಗೆ ನೀಡಬಹುದಾದ ಅತ್ಯುತ್ತಮ ಸಲಹೆಯೇನೆಂದರೆ ತಾವು ತಮ್ಮೆಲ್ಲ ಕರ್ಮಗಳಲ್ಲೂ ಅಲ್ಲಾಹುವಿನ ಗ್ರಂಥ (ಕುರ್‌ಆನ್) ಮತ್ತು ಅವನ ಸಂದೇಶವಾಹಕ(ﷺ)ರವರ ಸುನ್ನತ್ತನ್ನು ಅನುಸರಿಸಿರಿ. ಅಲ್ಲಾಹು ಹೇಳಿರುವನು:

﴿ وَأَطِيعُواْ ٱللَّهَ وَٱلرَّسُولَ لَعَلَّكُمۡ تُرۡحَمُونَ ﴾ ١٣٢

"ಮತ್ತು ಅಲ್ಲಾಹುವನ್ನು ಹಾಗೂ ಅವನ ಸಂದೇಶ ವಾಹಕನನ್ನು ಅನುಸರಿಸಿರಿ, ನಿಮಗೆ ಕರುಣೆ ತೋರಲ್ಪಡಲೂ ಬಹುದು." (ಕುರ್‌ಆನ್ 3/132)

# ವಿಶ್ವಾಸ (ಈಮಾನ್)ವನ್ನು ನಿಷ್ಫಲಗೊಳಿಸುವ ವಿಷಯಗಳು

ಸಹೋದರ ಸಹೋದರಿಯರೇ! ನಿಮ್ಮ ಇಸ್ಲಾಮನ್ನು ನಿಷ್ಫಲಗೊಳಿಸುವ ಕೆಲವು ವಿಷಯಗಳು ಇವೆಯೆಂಬುದರ ಬಗ್ಗೆ ನೀವು ಜಾಗೃತರಾಗಿರಿ. ಅವುಗಳ ಪೈಕಿ ಸಾಮಾನ್ಯವಾಗಿರುವ ಹತ್ತು ವಿಷಯಗಳನ್ನು ನಾವಿಲ್ಲಿ ಪ್ರಸ್ತಾಪಿಸುತ್ತಿರುವೆವು. ದಯವಿಟ್ಟು ಅವುಗಳ ಕುರಿತು ಸೂಕ್ಷ್ಮತೆ ಪಾಲಿಸಿರಿ.

**ಮೊದಲನೆಯದಾಗಿ:** ಅಲ್ಲಾಹುವಿನೊಂದಿಗೆ ಸಹಭಾಗಿತ್ವ ಮಾಡುವುದು (ಶಿರ್ಕ್):

ಅಲ್ಲಾಹು ಹೇಳಿರುವನು:

﴿ إِنَّهُۥ مَن يُشۡرِكۡ بِٱللَّهِ فَقَدۡ حَرَّمَ ٱللَّهُ عَلَيۡهِ ٱلۡجَنَّةَ وَمَأۡوَىٰهُ ٱلنَّارُۖ وَمَا لِلظَّٰلِمِينَ مِنۡ أَنصَارٖ ٧٢ ﴾

**“ಖಂಡಿತವಾಗಿಯೂ, ಯಾರು ಅಲ್ಲಾಹುವಿನೊಂದಿಗೆ**

**ಸಹಭಾಗಿತ್ವ ಮಾಡುತ್ತಾನೋ (ಶಿರ್ಕ್ ಮಾಡುತ್ತಾನೋ) ಅವನಿಗೆ ಅಲ್ಲಾಹು ಸ್ವರ್ಗವನ್ನು ನಿಷಿದ್ಧ ಗೊಳಿಸಿರುವನು ಮತ್ತು ಅವನ ವಾಸಸ್ಥಳವು ನರಕವಾಗಿರುವುದು, ಮತ್ತು ಅಕ್ರಮಿಗಳಿಗೆ ಸಹಾಯಕರಾಗಿ ಯಾರೂ ಇರಲಾರರು."** (ಕುರ್‌ಆನ್ 5/72)

ಮರಣಹೊಂದಿದವರೊಂದಿಗೆ ಪ್ರಾರ್ಥಿಸುವುದು, ಅವರೊಂದಿಗೆ ಸಹಾಯ ಬೇಡುವುದು, ಅಥವಾ ಅವರಿಗೆ ಹರಕೆ ಮತ್ತು ಬಲಿಗಳನ್ನು ಸಲ್ಲಿಸುವುದು, ಇವೆಲ್ಲವೂ ಶಿರ್ಕ್‌ನ ವಿವಿಧ ರೂಪಗಳಾಗಿವೆ.

**ಎರಡನೆಯದಾಗಿ:** ತನ್ನ ಮತ್ತು ಅಲ್ಲಾಹುವಿನ ನಡುವೆ ಮಧ್ಯವರ್ತಿಗಳನ್ನಿಟ್ಟು, ಅವರೊಂದಿಗೆ ಪ್ರಾರ್ಥಿಸುವುದು, ಅಲ್ಲಾಹುವಿನ ಬಳಿ ಶಿಫಾರಸ್ಸು ಮಾಡಲು ಅವರೊಂದಿಗೆ ಬೇಡುವುದು ಮತ್ತು ಅವರ ಮೇಲೆ ಭರವಸೆಯಿಡುವುದು ಕುಫ್ರ್ (ಅವಿಶ್ವಾಸ) ಆಗಿವೆ.

**ಮೂರನೆಯದಾಗಿ:** ಬಹುದೇವಾರಾಧಕ (ಮುಶ್ರಿಕ್) ರನ್ನು ಅವಿಶ್ವಾಸಿಗಳೆಂದು ಪರಿಗಣಿಸದವರು, ಅಥವಾ ಅವರ ಅವಿಶ್ವಾಸದ ಕುರಿತು ಸಂದೇಹ ತಾಳುವವರು, ಅಥವಾ ಅವರ ರೀತಿನೀತಿಗಳನ್ನು ಸರಿಯೆಂದು ಒಪ್ಪಿಕೊಳ್ಳುವವರು ಸ್ವತಃ ಅವಿಶ್ವಾಸಿ (ಕಾಫಿರ್‌ಗಳಾಗಿರುವರು.

**ನಾಲ್ಕನೆಯದಾಗಿ:** ಪ್ರವಾದಿ(ﷺ)ರವರ ಮಾರ್ಗದರ್ಶನಕ್ಕಿಂತಲೂ ಅನ್ಯರ ಮಾರ್ಗದರ್ಶನವು ಅತ್ಯಂತ ಸಮಗ್ರವಾಗಿದೆ, ಅಥವಾ ಪ್ರವಾದಿ(ﷺ)ರವರ ತೀರ್ಪಿಗಿಂತಲೂ ಅನ್ಯರ ತೀರ್ಪು ಅತ್ಯುತ್ತಮವಾಗಿದೆ ಎಂದು ಯಾರಾದರೂ ನಂಬುವುದಾದರೆ ಅವನು ಅವಿಶ್ವಾಸಿಯಾಗಿರುವನು. ಪ್ರವಾದಿ(ﷺ)ರವರ ಆಡಳಿತಕ್ಕಿಂತಲೂ ತಾಗೂತ್ (ಧಿಕ್ಕಾರಿ)ಗಳ ಆಡಳಿತಕ್ಕೆ ಪ್ರಾಶಸ್ತ್ಯ ನೀಡುವವರಿಗೂ ಇದು ಅನ್ವಯಿಸುತ್ತದೆ. ಉದಾಹರಣೆಗೆ:

**ಅ)** ಇಪ್ಪತ್ತನೇ ಶತಮಾನಕ್ಕೆ ಇಸ್ಲಾಮೀ ವ್ಯವಸ್ಥೆಯು ಸೂಕ್ತವಲ್ಲವೆನ್ನುವುದು.

**ಆ)** ಅಥವಾ ಮುಸ್ಲಿಮರ ಹಿಂದುಳಿಕೆಗೆ ಇಸ್ಲಾಮೀ ವ್ಯವಸ್ಥೆಯೇ ಕಾರಣವೆನ್ನುವುದು.

**ಇ)** ಅಥವಾ ಇಸ್ಲಾಮ್ ಎಂದರೆ ಅದು ಕೇವಲ ಮನುಷ್ಯ ಮತ್ತು ಅವನ ಪ್ರಭುವಿನ ನಡುವೆಯಿರುವ ಸಂಬಂಧ ಮಾತ್ರವಾಗಿದೆ, ಮತ್ತು ಅದಕ್ಕೆ ಬದುಕಿನ ಇತರ ಮಗ್ಗಲುಗಳೊಂದಿಗೆ ಯಾವ ಸಂಬಂಧವೂ ಇಲ್ಲವೆನ್ನುವುದು.

**ಬಿ.** ಅಲ್ಲಾಹುವಿನ ತೀರ್ಪುಗಳೊಂದಿಗೆ ಕಾರ್ಯ ನಿರ್ವಹಿಸುವುದು ಅಂದರೆ ಕಳ್ಳನ ಕೈ ಕಡಿಯುವುದು,

ಅಥವಾ ವ್ಯಭಿಚಾರಿಗೆ ಕಲ್ಲೆಸೆಯುವುದು ಇತ್ಯಾದಿ ಅಲ್ಲಾಹುವಿನ ವತಿಯಿಂದ ಆಜ್ಞಾಪಿಸಲಾದ, ಈ ಕಾಲಕ್ಕೆ ಅನುಯೋಜ್ಯವಲ್ಲದಂತಹ ಶಿಕ್ಷೆಗಳನ್ನು ಜಾರಿಗೊಳಿಸು ವುದಾಗಿದೆ ಎಂದು ಹೇಳುವುದು.

ಸಿ. ಇಸ್ಲಾಮೀ ವ್ಯವಹಾರಗಳಲ್ಲಿ ಅಥವಾ ಅಪರಾಧ ನ್ಯಾಯ ಮತ್ತು ಅದರಂತಿರುವ ವಿಷಯಗಳಲ್ಲಿ ಅಲ್ಲಾಹು ಅವತೀರ್ಣಗೊಳಿಸಿದ ಕಾನೂನಿಗೆ ಹೊರತಾದ ಕಾನೂನು ಪ್ರಕಾರ ಆಳ್ವಿಕೆ ನಡೆಸುವುದು ಸಮ್ಮತಾರ್ಹವೆಂದು ನಂಬುವುದು. ಅಂತಹ ಕಾನೂನುಗಳು ಶರೀಅತ್ತಿನ ಕಾನೂನುಗಳಿಗಿಂತಲೂ ಉತ್ಕೃಷ್ಟವಾಗಿವೆ ಎಂದು ಅವನು ವಿಶ್ವಾಸವಿಡದಿದ್ದರೂ ಕೂಡ. ಯಾಕೆಂದರೆ ಯಾವುದನ್ನು ಅಲ್ಲಾಹು ಅನುಮತಿಸಿಲ್ಲವೋ ಅದನ್ನವನು ತನ್ಮೂಲಕ ಸಮ್ಮತಾರ್ಹಗೊಳಿಸುತ್ತಿರುವನು. ಅಲ್ಲಾಹು ಅನುಮತಿಸದ ಕಾರ್ಯಗಳು ಅಂದರೆ ಸಾಮಾನ್ಯವಾಗಿ ಎಲ್ಲರೂ ಹರಾಮ್ ಎಂದು ತಿಳಿದಿರುವಂತಹ ವ್ಯಭಿಚಾರ, ಮದ್ಯಪಾನ, ಬಡ್ಡಿ ಇತ್ಯಾದಿ ಕಾರ್ಯಗಳನ್ನು ಯಾರು ಸಮ್ಮತಾರ್ಹವೆಂದು ಪರಿಗಣಿಸುತ್ತಾನೋ ಮುಸ್ಲಿಮರ ಏಕಾಭಿಪ್ರಾಯ ಪ್ರಕಾರ ಅವನು ಅವಿಶ್ವಾಸಿಯಾಗಿರುವನು.

**ಐದನೆಯದಾಗಿ:** ಅಲ್ಲಾಹುವಿನ ಸಂದೇಶವಾಹಕ(ﷺ)

ರವರು ಧರ್ಮಸಮ್ಮತವೆಂದು ಘೋಷಿಸಿದ ಯಾವುದೇ ವಿಷಯವನ್ನು ಅಸಹ್ಯಪಡುವವನು ತನ್ನ ಇಸ್ಲಾಮನ್ನು ನಿಷ್ಫಲಗೊಳಿಸಿರುವನು. ಅವನು ಅದನ್ನನುಸರಿಸಿ ಕಾರ್ಯಗತನಾದರೂ ಕೂಡ. ಅಲ್ಲಾಹು ಹೇಳಿರುವನು:

﴿ ذَٰلِكَ بِأَنَّهُمْ كَرِهُواْ مَآ أَنزَلَ ٱللَّهُ فَأَحْبَطَ أَعْمَٰلَهُمْ ﴿٩﴾ ﴾

**“ಅದು ಯಾಕೆಂದರೆ ಅಲ್ಲಾಹು ಅವತೀರ್ಣಗೊಳಿಸಿರುವುದನ್ನು ಅವರು ಅಸಹ್ಯಪಟ್ಟರು ಎಂಬುದರಿಂದಾಗಿದೆ. ಆದ್ದರಿಂದ ಅಲ್ಲಾಹು ಅವರ ಕರ್ಮಗಳನ್ನು ನಿಷ್ಫಲಗೊಳಿಸಿದನು.”** (ಕುರ್‌ಆನ್ 47/9)

**ಆರನೆಯದಾಗಿ:** ಅಲ್ಲಾಹುವನ್ನು, ಅಥವಾ ಅವನ ಗ್ರಂಥವನ್ನು, ಅಥವಾ ಅವನ ಸಂದೇಶವಾಹಕ(ﷺ)ರನ್ನು, ಅಥವಾ ಅಲ್ಲಾಹುವಿನ ಧರ್ಮದ ಯಾವುದೇ ಅಂಶವನ್ನು ಗೇಲಿಮಾಡುವವನು ಖಂಡಿತವಾಗಿಯೂ ಅವಿಶ್ವಾಸಿಯಾಗಿರುವನು. ಅಲ್ಲಾಹು ಹೇಳಿದ್ದಾನೆ:

﴿ قُلْ أَبِٱللَّهِ وَءَايَٰتِهِۦ وَرَسُولِهِۦ كُنتُمْ تَسْتَهْزِءُونَ
لَا تَعْتَذِرُواْ قَدْ كَفَرْتُم بَعْدَ إِيمَٰنِكُمْ ﴿٦٥﴾ ﴾

**“ಹೇಳಿರಿ: ಅಲ್ಲಾಹುವನ್ನು, ಅವನ ದೃಷ್ಟಾಂತಗಳನ್ನು ಮತ್ತು ಅವನ ಸಂದೇಶವಾಹಕರನ್ನು ನೀವು ಗೇಲಿ ಮಾಡುತ್ತಿರುವಿರಾ? ನೆಪವನ್ನು ಹೇಳಬೇಡಿರಿ. ವಿಶ್ವಾಸವನ್ನು ಸ್ವೀಕರಿಸಿದ ಬಳಿಕ ನೀವು ಅವಿಶ್ವಾಸಿಗಳಾಗಿ ಬಿಟ್ಟಿರುವಿರಿ.”** (ಕುರ್‌ಆನ್ 9/65–66)

**ಏಳನೆಯದಾಗಿ:** ಪತ್ನಿಯೊಂದಿಗಿರುವ ಪತಿಯ ಪ್ರೀತಿಯನ್ನು ದ್ವೇಷವಾಗಿ ಪರಿವರ್ತಿಸುವ ಮೂಲಕ ಪತಿಪತ್ನಿಯರನ್ನು ಬೇರ್ಪಡಿಸುವ, ಅಥವಾ ಓರ್ವ ವ್ಯಕ್ತಿ ಇಷ್ಟಪಡದಿರುವುದನ್ನು ಪೈಶಾಚಿಕ ಕಲೆಗಳ ಮೂಲಕ ಅವನಿಂದ ಮಾಡಿಸುವ ಪ್ರವೃತ್ತಿಗಳನ್ನು ಒಳಗೊಂಡಿರುವ ಮಾಂತ್ರಿಕ (ಮಾಟ) ಪ್ರವೃತ್ತಿಗಳನ್ನು ಯಾರು ಮಾಡು ತ್ತಾನೋ, ಅಥವಾ ಅದನ್ನು ತೃಪ್ತಿಪಡುತ್ತಾನೋ ಅವನು ಇಸ್ಲಾಮಿನ ವರ್ತುಲದಿಂದ ಹೊರಹೋದವನಾಗಿರುವನು. ಅಲ್ಲಾಹು ಹೇಳಿದ್ದಾನೆ:

﴿ وَمَا يُعَلِّمَانِ مِنْ أَحَدٍ حَتَّىٰ يَقُولَآ إِنَّمَا نَحْنُ فِتْنَةٌ فَلَا تَكْفُرْ ۖ ﴾

**“ನಾವು ಕೇವಲ ಪರೀಕ್ಷೆಯಾಗಿರುವೆವು, ಆದ್ದರಿಂದ**

**ಅವಿಶ್ವಾಸವನ್ನು ಕೈಗೊಳ್ಳದಿರು ಎಂದು ಹೇಳುವ ತನಕ ಅವರಿಬ್ಬರು (ಹಾರೂತ್ ಮತ್ತು ಮಾರೂತ್) ಜನರಿಗೆ ಏನನ್ನೂ ಕಲಿಸಿಕೊಟ್ಟಿಲ್ಲ."** (ಕುರ್ಆನ್ 2/102)

**ಎಂಟನೆಯದಾಗಿ:** ಮುಸ್ಲಿಮರಿಗೆದುರಾಗಿ ಬಹುದೇವ ವಿಶ್ವಾಸಿಗಳಿಗೆ ಬೆಂಬಲ ಮತ್ತು ಸಹಾಯ ನೀಡುವುದು. ಅಲ್ಲಾಹು ಹೇಳಿದ್ದಾನೆ:

﴿ وَمَن يَتَوَلَّهُم مِّنكُمْ فَإِنَّهُۥ مِنْهُمْ ۗ إِنَّ ٱللَّهَ لَا يَهْدِى ٱلْقَوْمَ ٱلظَّٰلِمِينَ ﴿٥١﴾ ﴾

**"ನಿಮ್ಮ ಪೈಕಿ ಯಾರು ಅವರನ್ನು ಬೆಂಬಲಿಸುತ್ತಾನೋ ಅವನು ಅವರ ಪೈಕಿ ಸೇರಿದವನಾಗಿರುವನು. ಅಲ್ಲಾಹು ಖಂಡಿತವಾಗಿಯೂ ಅಕ್ರಮಿಗಳಿಗೆ ಮಾರ್ಗದರ್ಶನವನ್ನು ನೀಡಲಾರನು."** (ಕುರ್ಆನ್ 5/51)

**ಒಂಬತ್ತನೆಯದಾಗಿ:** ಮುಹಮ್ಮದ್(ﷺ)ರವರ ಶರೀಅತ್ತನ್ನು ತೊರೆದು ಬೇರೆ ಮಾರ್ಗ ಅವಲಂಬಿಸಲು ಕೆಲವರಿಗೆ ಅನುಮತಿಸಲಾಗಿದೆ ಎಂದು ನಂಬುವವನು ಅವಿಶ್ವಾಸಿಯಾಗಿರುವನು. ಯಾಕೆಂದರೆ ಅಲ್ಲಾಹು ಹೇಳಿದ್ದಾನೆ:

﴿ وَمَن يَبْتَغِ غَيْرَ ٱلْإِسْلَٰمِ دِينًا فَلَن يُقْبَلَ مِنْهُ وَهُوَ فِى ٱلْءَاخِرَةِ مِنَ ٱلْخَٰسِرِينَ ﴿٨٥﴾ ﴾

**“ಇಸ್ಲಾಮಿನ ಹೊರತಾದ ಒಂದು ಧರ್ಮವನ್ನು ಯಾರಾದರೂ ಅನ್ವೇಷಿಸುವುದಾದರೆ ಅವನಿಂದ ಅದು ಎಂದಿಗೂ ಸ್ವೀಕೃತವಾಗಲಾರದು. ಮತ್ತು ಪರಲೋಕದಲ್ಲಿ ಅವನು ನಷ್ಟಹೊಂದಿದವರ ಪೈಕಿ ಸೇರಿದವನಾಗುವನು.”** (ಕುರ್‌ಆನ್ 3/85)

**ಹತ್ತನೆಯದಾಗಿ:** ಇಸ್ಲಾಮಿನ ವಿಧಿನಿಷೇಧಗಳನ್ನು ಕಲಿಯದೆ ಮತ್ತು ಅದರ ಮೇಲೆ ಕಾರ್ಯಗತನಾಗದೆ ಅಲ್ಲಾಹುವಿನ ಧರ್ಮವನ್ನು ನಿರ್ಲಕ್ಷಿಸುವುದು. ಅಲ್ಲಾಹು ಹೇಳಿದ್ದಾನೆ:

﴿ وَمَنْ أَظْلَمُ مِمَّن ذُكِّرَ بِـَٔايَٰتِ رَبِّهِۦ ثُمَّ أَعْرَضَ عَنْهَآ ۚ إِنَّا مِنَ ٱلْمُجْرِمِينَ مُنتَقِمُونَ ﴿٢٢﴾ ﴾

**“ತನ್ನ ಪ್ರಭುವಿನ ದೃಷ್ಟಾಂತಗಳ ಮೂಲಕ ಜ್ಞಾಪಿತ ಗೊಳಿಸಿದ ನಂತರ ಅದರಿಂದ ವಿಮುಖನಾಗುವವನಿಗಿಂತ ದೊಡ್ಡ ಅಕ್ರಮಿ ಇನ್ನಾರಿರುವನು? ಖಂಡಿತವಾಗಿಯೂ**

**ನಾವು ಅಪರಾಧಿಗಳನ್ನು ಶಿಕ್ಷಿಸುವೆವು.”** (ಕುರ್‌ಆನ್ 32/22)

ಅಲ್ಲಾಹು ಹೇಳಿದ್ದಾನೆ:

﴿ وَٱلَّذِينَ كَفَرُواْ عَمَّآ أُنذِرُواْ مُعۡرِضُونَ ٣ ﴾

**“ಅವಿಶ್ವಾಸವಿಟ್ಟವರು ಯಾರೋ ಅವರು ತಮಗೆ ಎಚ್ಚರಿಕೆ ನೀಡಲಾದ ಕಾರ್ಯಗಳಿಂದ ವಿಮುಖರಾಗಿರುವರು.”** (ಕುರ್‌ಆನ್ 46/3)

ಈ ಉಲ್ಲಂಘನೆಗಳನ್ನು ಹಾಸ್ಯಕ್ಕಾಗಿ, ಅಥವಾ ಮನಃಪೂರ್ವಕವಾಗಿ, ಅಥವಾ ಭಯದಿಂದ ಮಾಡಲಾದರೂ ಅದರಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಆದರೆ ಇವುಗಳನ್ನು ಬಲಾತ್ಕಾರವಾಗಿ ಮಾಡಿಸಲಾಗುವ ಹೊರತು.

ಅಲ್ಲಾಹುವಿನ ಕ್ರೋಧ ಮತ್ತು ಕಠೋರ ಶಿಕ್ಷೆಯನ್ನು ಆಹ್ವಾನಿಸುವ ಇಂತಹ ಕಾರ್ಯಗಳಿಂದ ನಾವು ಅವನಲ್ಲಿ ಶರಣು ಬೇಡುತ್ತಿರುವೆವು.

# ಹಜ್, ಉಮ್ರಾ ಮತ್ತು ಪ್ರವಾದಿಯ ಮಸೀದಿ ಸಂದರ್ಶನವನ್ನು ನಿರ್ವಹಿಸುವುದು ಹೇಗೆ?

ಪ್ರಿಯ ಸಹೋದರ ಸಹೋದರಿಯರೇ!

ಮೂರು ವಿಧಾನಗಳಲ್ಲಿ ಹಜ್ ನಿರ್ವಹಿಸಬಹುದಾಗಿದೆ.

ಹಜ್ ಅತ್ತಮತ್ತುಅ್ (ವಿರಾಮವಿರುವ ಹಜ್)

ಹಜ್ ಅಲ್‌ಕಿರಾನ್ (ಜೊತೆಗೂಡಿದ ಹಜ್)

ಹಜ್ ಅಲ್‌ಇಫ್ರಾದ್ (ಒಂಟಿ ಹಜ್)

**ಹಜ್ ಅತ್ತಮತ್ತುಅ್:** ಹಜ್ ತಿಂಗಳುಗಳಲ್ಲಿ (ಅಂದರೆ ಶವ್ವಾಲ್ ಒಂದರಿಂದ ದುಲ್‌ಹಿಜ್ಜಃ ಹತ್ತನೆಯ ಪ್ರಭಾತದವರೆಗಿನ ದಿನಗಳು) ಉಮ್ರಾ ನಿರ್ವಹಿಸುವುದಕ್ಕಾಗಿ ಇಹ್ರಾಮ್ ಪ್ರವೇಶಿಸಿ, ಉಮ್ರಾ ನಿರ್ವಹಿಸಿದ ನಂತರ ಇಹ್ರಾಮನ್ನು ಕಳಚಿ, ನಂತರ ಉಮ್ರಾ ನಿರ್ವಹಿಸಿದ ಅದೇ ವರ್ಷದ ದುಲ್‌ಹಿಜ್ಜಃ ಎಂಟನೇ ದಿನದಂದು ಮಕ್ಕಾ ಅಥವಾ ಅದರ ಸಮೀಪವಿರುವ ಸ್ಥಳದಿಂದ ಪುನಃ ಇಹ್ರಾಮ್ ಧರಿಸುವುದಾಗಿದೆ ಹಜ್ ಅತ್ತಮತ್ತುಅ್.

**ಹಜ್ ಅಲ್‌ಕಿರಾನ್:** ಹಜ್ ತಿಂಗಳುಗಳಲ್ಲಿ ಹಜ್ ಮತ್ತು ಉಮ್ರಕ್ಕಾಗಿ ಒಂದೇ ಸಮಯದಲ್ಲಿ ಇಹ್ರಾಮ್ ಪ್ರವೇಶಿಸಿ, ನಂತರ ಬಲಿದಿನದ (ದುಲ್‌ಹಿಜ್ಜಃ ಹತ್ತನೇ ದಿನದ) ವರೆಗೆ ಅದನ್ನು ಕಳಚದಿರುವುದನ್ನು ಹಜ್ ಅಲ್‌ಕಿರಾನ್ ಎನ್ನಲಾಗುತ್ತದೆ. ಅಥವಾ ಹಜ್ ತಿಂಗಳುಗಳಲ್ಲಿ ಉಮ್ರಾ ನಿರ್ವಹಿಸುವುದಕ್ಕಾಗಿ ಇಹ್ರಾಮ್ ಪ್ರವೇಶಿಸಿ, ನಂತರ ಉಮ್ರಾದ ತವಾಫ್ ಆರಂಭಿಸುವುದಕ್ಕೆ ಮುಂಚಿತವಾಗಿ ಹಜ್‌ಗಾಗಿ ಇಹ್ರಾಮ್ ಪ್ರವೇಶಿಸಿದ್ದೇನೆಂದು ನಿಯ್ಯತ್ ಮಾಡುವುದನ್ನು ಸಹ ಹಜ್ ಅಲ್‌ಕಿರಾನ್ ಎನ್ನಲಾಗುತ್ತದೆ.

**ಹಜ್ ಅಲ್‌ಇಫ್ರಾದ್:** ನಿರ್ದಿಷ್ಟ ಮೀಕಾತ್‌ನಿಂದ, ಅಥವಾ ತನ್ನ ಮನೆಯಿಂದ –ಅದು ಮೀಕಾತ್ ಮತ್ತು ಮಕ್ಕಾದ ಮಧ್ಯದಲ್ಲಿದ್ದರೆ– ಅಥವಾ ಮಕ್ಕಾದಿಂದ –ತಾನು ಮಕ್ಕಾ ನಿವಾಸಿಯಾಗಿದ್ದರೆ– ಹಜ್‌ನ ತಿಂಗಳುಗಳಲ್ಲಿ ಹಜ್‌ಗಾಗಿ ಇಹ್ರಾಮ್ ಪ್ರವೇಶಿಸಿ, ತಾನು ಬಲಿಮೃಗವನ್ನು ತಂದಿದ್ದರೆ ಬಲಿದಿನದವರೆಗೆ ಇಹ್ರಾಮ್‌ನಲ್ಲೇ ಉಳಿಯುವುದನ್ನು ಹಜ್ ಅಲ್‌ಇಫ್ರಾದ್ ಎನ್ನಲಾಗುತ್ತದೆ. ಬಲಿಮೃಗವನ್ನು ತರದಿದ್ದರೆ ಉಮ್ರಾ ನಿರ್ವಹಿಸಿದ ನಂತರ ಇಹ್ರಾಮ್‌ನಿಂದ ಹೊರಬರಲು ಅನುಮತಿಯಿದೆ. ತನ್ಮೂಲಕ ಅವನು ಹಜ್ ಅತ್ತಮತ್ತುಲ್

ನಿರ್ವಹಿಸುವವನಾಗುತ್ತಾನೆ. ಅಂದರೆ ಅವನು ಕಅ್‌ಬಾದ ಸುತ್ತಲೂ ತವಾಫ್ ಮಾಡಿ, ನಂತರ ಸಅ್‌ಯ್ ನಿರ್ವಹಿಸಿ (ಅಂದರೆ ಸಫಾ ಮತ್ತು ಮರ್ವಾಗಳ ಮಧ್ಯೆ ಓಡಿ), ಕೂದಲನ್ನು ಸ್ವಲ್ಪ ಕತ್ತರಿಸಿ, ಇಹ್ರಾಮ್‌ನಿಂದ ಹೊರಬಂದು, ತನ್ನ ಮಾಮೂಲಿ ಉಡುಪನ್ನು ಧರಿಸಿ, ಸಹಜ ಜೀವನವನ್ನು ಮುಂದುವರಿಸುತ್ತಾನೆ. ಬಲಿಮೃಗವನ್ನು ತರದೆ ಹಜ್‌ಗಾಗಿ ಇಹ್ರಾಮ್ ಪ್ರವೇಶಿಸಿದ ಜನರಿಗೆ ಪ್ರವಾದಿ (ﷺ)ರವರು ಹೀಗೆ ಆದೇಶಿಸಿದ್ದಾರೆ. ಬಲಿಮೃಗವನ್ನು ತರದೆ ಹಜ್ ಅಲ್‌ಕಿರಾನ್ ನಿರ್ವಹಿಸುವ ವ್ಯಕ್ತಿಗೂ ಇದು ಅನ್ವಯಿಸುತ್ತದೆ. ಅಂದರೆ ಮೇಲೆ ವಿವರಿಸಲಾದಂತೆ ಉಮ್ರಾ ನಿರ್ವಹಿಸಿದ ನಂತರ ಅವನಿಗೆ ಇಹ್ರಾಮ್‌ನಿಂದ ಹೊರಬರಬಹುದಾಗಿದೆ.

# ಉಮ್ರಾ ನಿರ್ವಹಣೆ

**1.** ನಿರ್ದೇಶಿತ ಸ್ಥಳ (ಮೀಕಾತ್)ವನ್ನು ತಲುಪಿದೊಡನೆ, ಶರೀರವನ್ನು ಸಂಪೂರ್ಣವಾಗಿ ತೊಳೆದು ಶುದ್ಧೀಕರಿಸಿ, ಶರೀರಕ್ಕೆ ಸ್ವಲ್ಪ ಸುಗಂಧ ಹಚ್ಚುವುದು –ಇಹ್ರಾಮ್‌ನ ವಸ್ತ್ರಗಳಿಗಲ್ಲ– ಸುನ್ನತ್ತಾಗಿದೆ. ತರುವಾಯ ಇಹ್ರಾಮ್‌ನ ಎರಡು ವಸ್ತ್ರಗಳನ್ನು (ಇಝಾರ್ ಮತ್ತು ರಿದಾಅ್ –ಅಂದರೆ ಸೊಂಟದ ಕೆಳಗಿನ ವಸ್ತ್ರ ಮತ್ತು ಶಾಲು) ಧರಿಸಿರಿ. ಇಹ್ರಾಮ್‌ನ ವಸ್ತ್ರಗಳು ಬಿಳಿಬಣ್ಣದ್ದಾಗಿರಲು ಆದ್ಯತೆ ನೀಡಿರಿ. ಸ್ತ್ರೀಯ ಕುರಿತು ಹೇಳುವುದಾದರೆ ಆಕೆ ಇಷ್ಟಪಡುವ ಯಾವುದೇ ವಸ್ತ್ರವನ್ನೂ ಧರಿಸಬಹುದು. ಆದರೆ ಅದು ಆಕೆಯ ಅಲಂಕಾರವನ್ನು ಪ್ರಕಟಗೊಳಿಸಬಾರದು, ಪುರುಷರನ್ನು ಹೋಲುವಂತಿರಬಾರದು ಮತ್ತು ಅವಿಶ್ವಾಸಿ ಸ್ತ್ರೀಯರ ಉಡುಪುಗಳನ್ನು ಹೋಲುವಂತಿರಬಾರದು.

ತರುವಾಯ

لَبَّيْكَ عُمْرَةً

“ಲಬ್ಬೈಕ ಉಮ್ರತನ್”

(ನಿನ್ನ ಕರೆಗೆ ಉತ್ತರಿಸಲು ಉಮ್ರಾದೊಂದಿಗೆ ನಾನಿಲ್ಲಿರುವೆನು) ಎಂದು ಉಮ್ರಾದ ನಿಯ್ಯತ್ ಮಾಡಿರಿ.

ನಂತರ ಈ ರೀತಿ ತಲ್ಬಿಯಃ ಹೇಳಿರಿ:

لَبَّيْكَ اللَّهُمَّ لَبَّيْكَ، لَبَّيْكَ لَا شَرِيكَ لَكَ لَبَّيْكَ،

إِنَّ الْحَمْدَ وَالنِّعْمَةَ لَكَ وَالْمُلْكُ، لَا شَرِيكَ لَكَ

**ಲಬ್ಬೈಕಲ್ಲಾಹುಮ್ಮ ಲಬ್ಬೈಕ್, ಲಬ್ಬೈಕ ಲಾ ಶರೀಕ ಲಕ ಲಬ್ಬೈಕ್, ಇನ್ನಲ್ ಹಮ್ದ ವನ್ನಿಅ್‌ಮತ ಲಕ ವಲ್ ಮುಲ್ಕ್, ಲಾ ಶರೀಕ ಲಕ್**

(ನಾನಿಲ್ಲಿರುವೆನು, ಓ ಅಲ್ಲಾಹ್! ನಾನಿಲ್ಲಿರುವೆನು. ನಾನಿಲ್ಲಿರುವೆನು, ನಿನಗೆ ಯಾವುದೇ ಸಹಭಾಗಿಯಿಲ್ಲ, ನಾನಿಲ್ಲಿರುವೆನು. ಖಂಡಿತವಾಗಿಯೂ, ಸ್ತುತಿ ಮತ್ತು ಅನು ಗ್ರಹವು ನಿನ್ನದಾಗಿದೆ, ಮತ್ತು ಆಧಿಪತ್ಯ ಕೂಡ. ನಿನಗೆ ಯಾವುದೇ ಸಹಭಾಗಿಯಿಲ್ಲ)

ಪುರುಷರು ಇದನ್ನು ಜೋರಾಗಿ ಉಚ್ಚರಿಸಬೇಕಾಗಿದೆ. ಆದರೆ ಸ್ತ್ರೀಯರು ಮೆತ್ತಗೆ ಹೇಳಬೇಕಾಗಿದೆ. ಈ ತಲ್ಬಿಯಃವನ್ನು ನಿರಂತರವಾಗಿ ಹೇಳುತ್ತಿರಿ ಮತ್ತು

ಅಲ್ಲಾಹುವನ್ನು ಸ್ತುತಿಸುವುದರಲ್ಲಿ ಮತ್ತು ಅವನೊಂದಿಗೆ ಪಾಪಮುಕ್ತಿ ಬೇಡುವುದರಲ್ಲಿ ತಲ್ಲೀನರಾಗಿರಿ.

**2.** ಮಕ್ಕಾ ತಲುಪಿದೊಡನೆ, ಕಪ್ಪು ಶಿಲೆ (ಹಜರುಲ್ ಅಸ್ವದ್)ಯಿಂದ ತಕ್ಬೀರ್ (ಅಲ್ಲಾಹು ಅಕ್ಬರ್) ಹೇಳುತ್ತಾ ಕಅ್‌ಬಾಲಯಕ್ಕೆ ಏಳು ಬಾರಿ ತವಾಫ್ (ಪ್ರದಕ್ಷಿಣೆ) ಮಾಡಿರಿ. ಪ್ರತಿಯೊಂದು ತವಾಫನ್ನೂ ಕಪ್ಪು ಶಿಲೆಯ ಬಳಿಯೇ ಸಮಾಪ್ತಿಗೊಳಿಸಿರಿ. ತವಾಫ್ ಮಾಡುತ್ತಿರುವಾಗ ಅಲ್ಲಾಹುವನ್ನು ಧಾರಾಳವಾಗಿ ಸ್ತುತಿಸಿರಿ ಮತ್ತು ಅವನೊಂದಿಗೆ ನಿರಂತರ ಪ್ರಾರ್ಥಿಸುತ್ತಿರಿ. ಪ್ರಾರ್ಥನೆ ಶರೀಅತ್‌ಗೆ ವಿರುದ್ಧವಾಗಿರದ ರೀತಿಯಲ್ಲಿ ನೀವಿಚ್ಛಿಸುವ ಯಾವ ಭಾಷೆಯಲ್ಲೂ ಆಗಬಹುದು. ತವಾಫ್ ಮಾಡುತ್ತಿರುವ ಸಂದರ್ಭ ಯಮಾನೀ ಮೂಲೆ (ರುಕ್ನುಲ್ ಯಮಾನೀ) ಮತ್ತು ಕಪ್ಪು ಶಿಲೆ (ಹಜರುಲ್ ಅಸ್ವದ್)ನ ಮಧ್ಯೆ ತಲುಪುವಾಗ ಈ ಕೆಳಗಿನ ಪ್ರಾರ್ಥನೆ ಹೇಳುವುದು ಸುನ್ನತ್ತಾಗಿದೆ:

﴿ رَبَّنَآ ءَاتِنَا فِى ٱلدُّنْيَا حَسَنَةً وَفِى ٱلْءَاخِرَةِ
حَسَنَةً وَقِنَا عَذَابَ ٱلنَّارِ ٢٠١ ﴾

**“ರಬ್ಬನಾ ಆತಿನಾ ಫಿದ್ದುನ್ಯಾ ಹಸನತನ್ ವಫಿಲ್ ಆಖಿರತಿ ಹಸನತನ್ ವಕಿನಾ ಅದಾಬನ್ನಾರ್.”**

(ನಮ್ಮ ಪ್ರಭೂ! ನಮಗೆ ಇಹಲೋಕದಲ್ಲಿ ಒಳಿತನ್ನು ನೀಡು ಮತ್ತು ಪರಲೋಕದಲ್ಲೂ ಒಳಿತನ್ನು ನೀಡು ಮತ್ತು ನಮ್ಮನ್ನು ನರಕ ಶಿಕ್ಷೆಯಿಂದ ಪಾರುಮಾಡು)

ಏಳನೆಯ ತವಾಫ್ ಮುಗಿದ ಬಳಿಕ, ಸಾಧ್ಯವಾದರೆ ಮಕಾಮ್ ಇಬ್ರಾಹೀಮ್‌ನ ಹಿಂಬದಿಯಲ್ಲಿ ಎರಡು ರಕ್‌ಅತ್ ನಮಾಝ್ ನಿರ್ವಹಿಸಿರಿ. ಅದರಿಂದ ಸ್ವಲ್ಪ ದೂರದಲ್ಲಿ ನಮಾಝ್ ಮಾಡಿದರೂ ಪರವಾಗಿಲ್ಲ. ಅದು ಸಾಧ್ಯವಾಗದಿದ್ದಲ್ಲಿ ಪವಿತ್ರ ಮಸೀದಿಯ ಯಾವ ಭಾಗದಲ್ಲೂ ನಮಾಝ್ ನಿರ್ವಹಿಸಬಹುದು.

ಪುರುಷರಿಗೆ ತವಾಫ್ ಮಾಡುತ್ತಿರುವಾಗ ‘ಇದ್ತಿಬಾಅ್’ ಮಾಡುವುದು ಸುನ್ನತ್ತಾಗಿದೆ. ಇದ್ತಿಬಾಅ್ ಎಂದರೆ ಇಹ್ರಾಮಿನ ಮೇಲ್ವಸ್ತ್ರದ ನಡುಭಾಗವನ್ನು ಬಲತೋಳಿನ ಅಡಿಭಾಗದಲ್ಲಿಟ್ಟು ಅದರ ಎರಡು ತುದಿಗಳನ್ನು ಎಡ ಹೆಗಲ ಮೇಲೆ ಕಟ್ಟುವ ಮೂಲಕ ಬಲ ಹೆಗಲನ್ನು ಪ್ರದರ್ಶಿಸುವುದಾಗಿದೆ. ಹಾಗೆಯೇ, ‘ರಮ್ಲ್’ ಮಾಡುವುದು ಕೂಡ ಪುರುಷರಿಗೆ ಸುನ್ನತ್ತಾಗಿದೆ. ರಮ್ಲ್ ಎಂದರೆ ಮೊದಲ ಮೂರು ತವಾಫ್‌ಗಳಲ್ಲಿ ಬಿರುಸಾಗಿ

ನಡೆಯುವುದಾಗಿದೆ.

**3**. ತರುವಾಯ, ಸಫಾ ಬೆಟ್ಟದತ್ತ ಚಲಿಸಿ ಅದನ್ನು ಹತ್ತಿರಿ ಮತ್ತು ಅಲ್ಲಾಹುವಿನ ಈ ವಚನವನ್ನು ಪಾರಾಯಣ ಮಾಡಿರಿ:

﴿ ۞ إِنَّ ٱلصَّفَا وَٱلْمَرْوَةَ مِن شَعَآئِرِ ٱللَّهِ ۖ فَمَنْ حَجَّ ٱلْبَيْتَ أَوِ ٱعْتَمَرَ فَلَا جُنَاحَ عَلَيْهِ أَن يَطَّوَّفَ بِهِمَا ۚ وَمَن تَطَوَّعَ خَيْرًا فَإِنَّ ٱللَّهَ شَاكِرٌ عَلِيمٌ ١٥٨ ﴾

**“ಇನ್ನ ಸ್ಸಫಾ ವಲ್ ಮರ್ವತ ಮಿನ್ ಶಆಇರಿಲ್ಲಾಹ್, ಫಮನ್ ಹಜ್ಜಲ್ ಬೈತ ಅವಿಅ್‌ತಮರ ಫಲಾ ಜುನಾಹ ಅಲೈಹಿ ಅನ್ ಯತ್ತವ್ವಫ ಬಿಹಿಮಾ, ವಮನ್ ತತವ್ವಅ ಖೈರನ್ ಫಇನ್ನಲ್ಲಾಹ ಶಾಕಿರುನ್ ಅಲೀಮ್.”**

(ಖಂಡಿತವಾಗಿಯೂ, ಸಫಾ ಮತ್ತು ಮರ್ವಾ ಅಲ್ಲಾಹುವಿನ ಚಿಹ್ನೆಗಳಲ್ಲಿ ಸೇರಿದ್ದಾಗಿವೆ. ಆದ್ದರಿಂದ ಹಜ್ಜ್ ಅಥವಾ ಉಮ್ರಾ ನಿರ್ವಹಿಸುವವನಿಗೆ ಅವುಗಳ ಮಧ್ಯೆ ಪ್ರದಕ್ಷಿಣೆ ಮಾಡುವುದರಲ್ಲಿ ದೋಷವಿಲ್ಲ. ಯಾರಾದರೂ ಸ್ವಇಚ್ಛೆಯಿಂದ ಒಳಿತು ಮಾಡಿದರೆ ಖಂಡಿತವಾಗಿಯೂ ಅಲ್ಲಾಹು ಕೃತಜ್ಞನೂ ಸರ್ವಜ್ಞನೂ ಆಗಿರುವನು.)

ತರುವಾಯ ಕಅ್‌ಬಾದತ್ತ ತಿರುಗಿ, ಪಾರ್ಥನೆ ಮಾಡುವಾಗ ಕೈ ಎತ್ತುವಂತೆ ಎತ್ತಿ ಅಲ್ಲಾಹುವನ್ನು ಸ್ತುತಿಸಿರಿ ಮತ್ತು ಮೂರು ಬಾರಿ ತಕ್ಬೀರ್ (ಅಲ್ಲಾಹು ಅಕ್ಬರ್) ಹೇಳಿರಿ. ತರುವಾಯ ನಿಮಗಿಷ್ಟವಾದ ಪ್ರಾರ್ಥನೆಯನ್ನು ಮೂರು ಮೂರು ಬಾರಿ ಪುನರಾವರ್ತಿಸುತ್ತಾ ಪ್ರಾರ್ಥಿಸಿರಿ. ಈ ರೀತಿ ಮೂರು ಮೂರು ಬಾರಿ ಪುನರಾವರ್ತಿಸುತ್ತಾ ಪ್ರಾರ್ಥಿಸುವುದು ಸುನ್ನತ್ತಾಗಿದೆ. ತರುವಾಯ ಹೀಗೆನ್ನಿರಿ:

لَا إِلَهَ إِلَّا اللَّهُ وَحْدَهُ لَا شَرِيكَ لَهُ، لَهُ الْمُلْكُ وَلَهُ الْحَمْدُ وَهُوَ عَلَى كُلِّ شَيْءٍ قَدِيرٌ؛ لَا إِلَهَ إِلَّا اللَّهُ وَحْدَهُ، أَنْجَزَ وَعْدَهُ، وَنَصَرَ عَبْدَهُ وَحَزَمَ الْأَحْزَابَ وَحْدَهُ

**“ಲಾಇಲಾಹ ಇಲ್ಲಲ್ಲಾಹು ವಹ್ದಹೂ ಲಾ ಶರೀಕ ಲಹೂ, ಲಹುಲ್ ಮುಲ್ಕು ವಲಹುಲ್ ಹಮ್ದು ವಹುವ ಅಲಾ ಕುಲ್ಲಿ ಶೈಇನ್ ಕದೀರ್. ಲಾಇಲಾಹ ಇಲ್ಲಲ್ಲಾಹು ವಹ್ದಹೂ, ಅನ್ಜಝು ವಅ್‌ದಹೂ, ವನಸರ ಅಬ್ದಹೂ**

ವಹಝಮಲ್ ಅಹ್‌ಝಾಬ ವಹ್ದಹೂ."

(ಅಲ್ಲಾಹುವಿನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಏಕೈಕನೂ ಸಹಭಾಗಿರಹಿತನೂ ಆಗಿರುವನು. ಆಧಿಪತ್ಯ ಅವನದ್ದಾಗಿದೆ ಮತ್ತು ಸ್ತುತಿ ಅವನಿಗಾಗಿದೆ. ಅವನು ಎಲ್ಲ ವಿಷಯಗಳಲ್ಲೂ ಸಾಮರ್ಥ್ಯವುಳ್ಳವನಾಗಿರುವನು. ಅಲ್ಲಾಹುವಿನ ಹೊರತು ಅನ್ಯ ಆರಾಧ್ಯರಿಲ್ಲ. ಅವನು ಏಕೈಕನಾಗಿರುವನು. ಅವನು ತನ್ನ ವಾಗ್ದಾನವನ್ನು ಪಾಲಿಸಿರುವನು, ತನ್ನ ದಾಸನಿಗೆ ನೆರವಾಗಿರುವನು ಮತ್ತು ಅವನು (ಅವಿಶ್ವಾಸಿಗಳ) ಪಕ್ಷಗಳೆಲ್ಲವನ್ನೂ ಏಕಾಂಗಿ ಯಾಗಿ ಸೋಲಿಸಿರುವನು.)

ಈ ಪ್ರಾರ್ಥನೆಯನ್ನು ಮೂರು ಬಾರಿ ಪುನರಾ ವರ್ತಿಸುವುದು ಒಳ್ಳೆಯದು. ಆದರೆ ಅದಕ್ಕಿಂತ ಕಡಿಮೆ ಬಾರಿಯಾದರೂ ಪರವಾಗಿಲ್ಲ.

ತರುವಾಯ ಸಫಾ ಬೆಟ್ಟದಿಂದ ಇಳಿದು ಉಮ್ರಕ್ಕಾಗಿ ರುವ ಏಳು ಸಅ್‌ಯ್‌ಗಳನ್ನು ನಿರ್ವಹಿಸಿರಿ. ಸಅ್‌ಯ್ ನಿರ್ವಹಿಸುವಾಗ ಎರಡು ಹಸಿರು ಗಂಬಗಳ ಮಧ್ಯೆ ಬಿರುಸಾಗಿ ನಡೆಯಿರಿ. ಅದರ ಹೊರತಾದ ಸ್ಥಳಗಳಲ್ಲಿ ಸಹಜ ಸ್ಥಿತಿಯಲ್ಲಿ ನಡೆಯಿರಿ. ತರುವಾಯ ಮರ್ವಾ ಬೆಟ್ಟವನ್ನು ಏರಿ ಅಲ್ಲಾಹುವನ್ನು ಸ್ತುತಿಸಿ ಸಫಾ ಬೆಟ್ಟದಲ್ಲಿ

ಮಾಡಿದಂತೆಯೇ ಮಾಡಿರಿ.

ತವಾಫ್ ಮತ್ತು ಸಅ್‌ಯ್‌ಗೆ ಅನಿವಾರ್ಯವಾದ ಅಥವಾ ನಿರ್ದಿಷ್ಟವಾದ ಪ್ರಾರ್ಥನೆಗಳಿಲ್ಲ. ಭಕ್ತನು ಅಲ್ಲಾಹುವನ್ನು ಸ್ತುತಿಸುತ್ತಿರಬಹುದು ಅಥವಾ ತನ್ನದೇ ಭಾಷೆಯಲ್ಲಿ ಪ್ರಾರ್ಥಿಸುತ್ತಿರಬಹುದು ಅಥವಾ ಕುರ್‌ಆನಿನ ಭಾಗಗಳನ್ನು ಪಾರಾಯಣ ಮಾಡಬಹುದು. ಪ್ರಾರ್ಥಿಸುವಾಗ ಪ್ರವಾದಿ(ﷺ)ರವರು ವಿವಿಧ ಸ್ಥಳಗಳಲ್ಲಿ ಪ್ರಾರ್ಥಿಸಿದ ಪ್ರಾರ್ಥನೆಗಳನ್ನು ಆ ಸ್ಥಳಗಳಲ್ಲಿ ಪ್ರಾರ್ಥಿಸುವುದು ಸೂಕ್ತವಾಗಿದೆ.

**4.** ಸಅ್‌ಯ್ ನಿರ್ವಹಿಸಿದ ಬಳಿಕ, ತಲೆಬೋಳಿಸುವ ಅಥವಾ ಕೂದಲನ್ನು ಕಿರಿದಾಗಿಸುವ ಮೂಲಕ ಉಮ್ರವನ್ನು ಸಮಾಪ್ತಿಗೊಳಿಸಿರಿ. ಇದರ ಬಳಿಕ ಇಹ್ರಾಮಿಗೆ ಸಂಬಂಧಿಸಿದ ಸರ್ವ ನಿರ್ಬಂಧಗಳೂ ಎತ್ತಲ್ಪಡುತ್ತವೆ. ತರುವಾಯ ನಿಮಗೆ ನಿಮ್ಮ ಸಹಜ ಜೀವನವನ್ನು ಮುಂದುವರಿಸಬಹುದಾಗಿದೆ.

ನೀವು ಹಜ್ ಅತ್ತಮತ್ತುಅ್ ನಿರ್ವಹಿಸುವವರಾಗಿದ್ದರೆ ತಲೆಗೂದಲನ್ನು ಬೋಳಿಸುವುದಕ್ಕಿಂತಲೂ ಕಿರಿದಾಗಿಸುವುದು ಹೆಚ್ಚು ಸೂಕ್ತವಾಗಿದೆ. ಯಾಕೆಂದರೆ ಇದರಿಂದಾಗಿ ಹಜ್ಜ್ ಮುಕ್ತಾಯಗೊಳಿಸುವಾಗ ತಲೆಬೋಳಿಸಲು ಅನು

ವಾಗುವಂತೆ ತಲೆಯಲ್ಲಿ ಕೂದಲು ಬಾಕಿಯುಳಿಯುತ್ತದೆ.

ನೀವು ಹಜ್ಜ್ ಅತ್ತಮತ್ತುಅ್ ಅಥವಾ ಹಜ್ ಅಲ್‌ಕಿರಾನ್ ನಿರ್ವಹಿಸುವವರಾಗಿದ್ದರೆ ಕುರಿಯೊಂದನ್ನು, ಅಥವಾ ಒಂಟೆಯ ಏಳನೆ ಒಂದು ಭಾಗವನ್ನು, ಅಥವಾ ಹಸುವಿನ ಏಳನೆ ಒಂದು ಭಾಗವನ್ನು ಬಲಿ ನೀಡುವುದು ಕಡ್ಡಾಯವಾಗಿದೆ. ನೀವದನ್ನು ಬಲಿದಿನದಂದು (ಅಂದರೆ ದುಲ್‌ಹಿಜ್ಜ ಹತ್ತರಂದು) ಬಲಿ ನೀಡಬೇಕಾಗಿದೆ. ಬಲಿ ನೀಡಲು ನಿಮಗೆ ಸಾಧ್ಯವಾಗುವುದಿಲ್ಲವಾದರೆ –ಹಜ್ಜ್ ವೇಳೆಯಲ್ಲಿ ಮೂರು ದಿನ ಮತ್ತು ಮನೆಗೆ ಮರಳಿದ ಬಳಿಕ ಏಳು ದಿನ– ಹೀಗೆ ಒಟ್ಟು ಹತ್ತು ದಿನ ಉಪವಾಸ ಆಚರಿಸುವುದು ಕಡ್ಡಾಯವಾಗಿದೆ.

ಹಜ್ಜ್ ವೇಳೆಯಲ್ಲಿ ಆಚರಿಸಲಾಗುವ ಮೂರು ದಿನಗಳ ಉಪವಾಸವನ್ನು ಅರಫಾ ದಿನದ (ಅಂದರೆ ದುಲ್‌ಹಿಜ್ಜ ಒಂಬತ್ತರ) ಮುಂಚೆ ಆಚರಿಸುವುದು ಸೂಕ್ತ. ಆದರೆ ಈದುಲ್ ಅದ್‌ಹಾದ ಬಳಿಕ ಮೂರು ದಿನ ಉಪವಾಸ ಆಚರಿಸಿದರೂ ತೊಂದರೆಯಿಲ್ಲ.

# ಹಜ್ ನಿರ್ವಹಣೆ

**1.** ನೀವು ಹಜ್ ಅಲ್‌ಇಫ್ರಾದ್ ಅಥವಾ ಹಜ್ ಅಲ್‌ಕಿರಾನ್ ನಿರ್ವಹಿಸುವವರಾಗಿದ್ದರೆ ಇಹ್ರಾಮ್‌ನ ಸ್ಥಳದಲ್ಲಿ (ಮೀಕಾತ್‌ನಲ್ಲಿ) –ಅದು ಮಕ್ಕಾದೆಡೆಗಿರುವ ನಿಮ್ಮ ದಾರಿ ಮಧ್ಯೆಯಾಗಿದ್ದರೆ– ಇಹ್ರಾಮನ್ನು ಪ್ರವೇಶಿಸಿರಿ. ಒಂದು ವೇಳೆ ನೀವು ಮಕ್ಕಾ ಮತ್ತು ಮೀಕಾತ್‌ನ ಮಧ್ಯೆ ವಾಸಿಸುವವರಾಗಿದ್ದರೆ, ನಿಮ್ಮ ವಾಸಸ್ಥಳದಿಂದಲೇ ನೀವಿಚ್ಛಿಸುವ ವಿಧದ ಹಜ್‌ಗಾಗಿ ಇಹ್ರಾಮನ್ನು ಪ್ರವೇಶಿಸಿರಿ.

ನೀವು ಹಜ್ ಅತ್ತಮತ್ತುಅ್ ನಿರ್ವಹಿಸುವವರಾಗಿದ್ದರೆ ನೀವು ಮಕ್ಕಃಕ್ಕೆ ಬರುವ ಹಾದಿಯಲ್ಲಿರುವ ಮೀಕಾತ್‌ನಲ್ಲಿ ಉಮ್ರಕ್ಕಾಗಿ ಇಹ್ರಾಮ್ ಪ್ರವೇಶಿಸಿರಿ. ತರುವಾಯ ದುಲ್‌ಹಿಜ್ಜಃ 8ರಂದು ಮಕ್ಕಾದಲ್ಲಿರುವ ನಿಮ್ಮ ನಿವಾಸದಿಂದಲೇ ಹಜ್‌ಗಾಗಿ ಇಹ್ರಾಮ್ ಪ್ರವೇಶಿಸಿರಿ. ಅಂದರೆ ನೀವು ನಿಮ್ಮ ಸಂಪೂರ್ಣ ದೇಹವನ್ನು ತೊಳೆದು, ಸಾಧ್ಯವಿದ್ದರೆ ಸ್ವಲ್ಪ ಸುಗಂಧ ದ್ರವ್ಯ ಹಚ್ಚಿ, ತರುವಾಯ ಇಹ್ರಾಮ್‌ನ ಎರಡು ವಸ್ತ್ರಗಳನ್ನು ಧರಿಸಿರಿ. ಇಹ್ರಾಮ್ ಧರಿಸಿದ ಬಳಿಕ ಹೀಗೆ ನಿಯ್ಯತ್ ಮಾಡಿರಿ:

لَبَّيْكَ حَجًّا

**“ಲಬ್ಬೈಕ ಹಜ್ಜನ್”**

(ನಿನ್ನ ಕರೆಗೆ ಉತ್ತರಿಸಲು ಹಜ್‌ನೊಂದಿಗೆ ನಾನಿಲ್ಲಿ ರುವೆನು)

ನಂತರ ತಲ್ಬಿಯಃ ಹೇಳಿರಿ:

لَبَّيْكَ اللَّهُمَّ لَبَّيْكَ، لَبَّيْكَ لَا شَرِيكَ لَكَ لَبَّيْكَ،
إِنَّ الْحَمْدَ وَالنِّعْمَةَ لَكَ وَالْمُلْكُ، لَا شَرِيكَ لَكَ

**“ಲಬ್ಬೈಕಲ್ಲಾಹುಮ್ಮ ಲಬ್ಬೈಕ್, ಲಬ್ಬೈಕ ಲಾ ಶರೀಕ ಲಕ ಲಬ್ಬೈಕ್, ಇನ್ನಲ್ ಹಮ್ದ ವನ್ನಿಅ್‌ಮತ ಲಕ ವಲ್ ಮುಲ್ಕ್, ಲಾ ಶರೀಕ ಲಕ್”**

(ನಾನಿಲ್ಲಿರುವೆನು, ಓ ಅಲ್ಲಾಹ್! ನಾನಿಲ್ಲಿರುವೆನು. ನಾನಿಲ್ಲಿರುವೆನು, ನಿನಗೆ ಯಾವುದೇ ಸಹಭಾಗಿಯಿಲ್ಲ, ನಾನಿಲ್ಲಿರುವೆನು. ಖಂಡಿತವಾಗಿಯೂ, ಸ್ತುತಿ ಮತ್ತು ಅನುಗ್ರಹವು ನಿನ್ನದಾಗಿದೆ, ಮತ್ತು ಅಧಿಪತ್ಯ ಕೂಡ. ನಿನಗೆ ಯಾವುದೇ ಸಹಭಾಗಿಯಿಲ್ಲ)

**2**. ತರುವಾಯ, ಮಿನಾದೆಡೆಗೆ ಚಲಿಸಿರಿ. ಅಲ್ಲಿ

ದುಹ್ರ್, ಅಸ್ರ್, ಮಗ್ರಿಬ್, ಇಶಾ ಮತ್ತು (ಮರುದಿನದ) ಫಜ್ರ್ ನಮಾಝ್‌ಗಳನ್ನು, ಕಸ್ರ್ ಮಾಡಿ ಅಂದರೆ ನಾಲ್ಕು ರಕ್‌ಅತ್‌ಗಳನ್ನು ಎರಡು ರಕ್‌ಅತ್‌ಗಳಾಗಿ ಅವುಗಳ ನಿಶ್ಚಿತ ಸಮಯಗಳಲ್ಲೇ ನಿರ್ವಹಿಸಿರಿ. ನಮಾಝ್‌ಗಳನ್ನು ಜಮ್‌ಅ್ ಮಾಡಬೇಡಿರಿ ಅಂದರೆ ಜೊತೆಗೂಡಿಸಬೇಡಿರಿ.

**3**. ದುಲ್‌ಹಿಜ್ಜಃ 9ರಂದು ಸೂರ್ಯೋದಯವಾದೊಡನೆ, ಸಹ ಯಾತ್ರಾರ್ಥಿಗಳಿಗೆ ತೊಂದರೆಯುಂಟು ಮಾಡದೆ ಗಂಭೀರವಾಗಿ ಅರಫಾತ್‌ನತ್ತ ಚಲಿಸಿರಿ. ಅರಫಾತ್‌ನಲ್ಲಿ ದುಹ್ರ್‌ನ ಸಮಯದಲ್ಲಿ ದುಹ್ರ್ ಮತ್ತು ಅಸ್ರ್ ನಮಾಝ್‌ಗಳನ್ನು ಕಸ್ರ್ ಮತ್ತು ಜಮ್‌ಅ್ ಮಾಡಿ ಒಂದು ಅದಾನ್ ಮತ್ತು ಎರಡು ಇಕಾಮತ್‌ಗಳೊಂದಿಗೆ (ಅಂದರೆ ಪ್ರತಿಯೊಂದು ನಮಾಝ್‌ಗೂ ಒಂದು ಇಕಾಮತ್ ಎಂಬಂತೆ) ನಿರ್ವಹಿಸಿರಿ.

ನೀವು ಅರಫಾತ್‌ನ ಗಡಿಯೊಳಗೇ ಇದ್ದೀರಿ ಎಂಬುದನ್ನು ಖಚಿತಪಡಿಸಿಕೊಳ್ಳಿರಿ. ಅಲ್ಲಾಹುವನ್ನು ಸ್ತುತಿಸುತ್ತಿರಿ ಮತ್ತು ಪ್ರವಾದಿ(ﷺ)ರವರ ಚರ್ಯೆಯಂತೆ ಕಿಬ್ಲಕ್ಕೆ ಮುಖಮಾಡಿ ಕೈಗಳನ್ನೆತ್ತಿ ಪ್ರಾರ್ಥಿಸುತ್ತಿರಿ. ಅರಫಾತ್‌ನ ಸಂಪೂರ್ಣ ಪ್ರದೇಶವು ಈ ನಿಲ್ಲುವಿಕೆಗಾಗಿ ಇರುವುದಾಗಿದೆ. ಸೂರ್ಯಾಸ್ತದ ನಂತರದವರೆಗೆ ಅರಫಾತ್‌ನಲ್ಲೇ

ತಂಗಿರಿ.

**4**. ಸೂರ್ಯಾಸ್ತದ ನಂತರ ತಲ್ಬಿಯಃ ಹೇಳುತ್ತಾ ಶಾಂತವಾಗಿ ಮತ್ತು ಗಂಭೀರವಾಗಿ ಮುಝ್ದಲಿಫಾದತ್ತ ಚಲಿಸಿರಿ. ಸಹ ಮುಸ್ಲಿಮರಿಗೆ ಯಾವುದೇ ತೊಂದರೆಯನ್ನಾಗಲಿ ಕ್ಲೇಶವನ್ನಾಗಲಿ ಮಾಡಬೇಡಿರಿ. ಮುಝ್ದಲಿಫಾ ತಲುಪಿದೊಡನೆ ಮಗ್ರಿಬ್ ಮತ್ತು ಇಶಾ ನಮಾಝ್‌ಗಳನ್ನು ಜಮ್‌ಅ್ ಮಾಡಿ ಇಶಾ ನಮಾಝ್ ಎರಡು ರಕ್‌ಅತ್‌ಗಳಾಗಿ ಕಸ್ರ್ ಮಾಡಿ ನಿರ್ವಹಿಸಿರಿ. ಫಜ್ರ್ ನಮಾಝ್ ನಿರ್ವಹಿಸಿದ ಬಳಿಕ ಮತ್ತು ಪ್ರಭಾತದ ಬೆಳಕು ವಿಶಾಲವಾಗಿ ಹರಡುವವರೆಗೆ ಮುಝ್ದಲಿಫಾದಲ್ಲೇ ತಂಗಿರಿ. ಅಲ್ಲಾಹುವನ್ನು ಅತ್ಯಧಿಕವಾಗಿ ಸ್ಮರಿಸಿರಿ ಮತ್ತು ಪ್ರವಾದಿ(ﷺ)ರವರ ಚರ್ಯೆಯಂತೆ ಕಿಬ್ಲಕ್ಕೆ ಮುಖ ಮಾಡಿ ಕೈಗಳನ್ನೆತ್ತಿ ಪ್ರಾರ್ಥಿಸುತ್ತಿರಿ.

**5**. ತರುವಾಯ, ಸೂರ್ಯೋದಯಕ್ಕೆ ಮುಂಚಿತವಾಗಿ ಮಿನಾದೆಡೆಗೆ ಚಲಿಸಿರಿ ಮತ್ತು ಚಲಿಸುವಾಗ ತಲ್ಬಿಯಃ ಹೇಳುತ್ತಿರಿ. ಯಾತ್ರಾರ್ಥಿಯು ವಿನಾಯಿತಿಯಿರುವವರ ಪೈಕಿ ಅಂದರೆ ಸ್ತ್ರೀ ಅಥವಾ ಬಲಹೀನರ ಪೈಕಿ ಸೇರಿದವರಾಗಿದ್ದರೆ ಮಧ್ಯರಾತ್ರಿಯ ನಂತರ ಯಾವುದೇ ಸಮಯದಲ್ಲೂ ಅವರಿಗೆ ಮಿನಾದೆಡೆಗೆ ತೆರಳಲು

ಅನುಮತಿಯಿದೆ.

ಜಮ್ರತುಲ್ ಅಕಬಕ್ಕೆ ಎಸೆಯಬೇಕಾದ ಏಳು ಹರಳು ಕಲ್ಲುಗಳನ್ನು ಮುಝ್ದಲಿಫಾದಿಂದ ಹೆಕ್ಕಿರಿ. ಉಳಿದ ಕಲ್ಲುಗಳನ್ನು ಮಿನಾದಿಂದ ಹೆಕ್ಕಬಹುದು. ಜಮ್ರತುಲ್ ಅಕಬಕ್ಕೆ ಎಸೆಯಬೇಕಾದ ಏಳು ಹರಳು ಕಲ್ಲುಗಳನ್ನು ಮಿನಾದಿಂದಲೇ ಹೆಕ್ಕಿದರೂ ತೊಂದರೆಯಿಲ್ಲ.

**6**. ನೀವು ಮಿನಾಗೆ ಬಂದರೆ ಈ ಕೆಳಗಿನವುಗಳನ್ನು ಮಾಡಿರಿ:

**ಎ**. ಜಮ್ರತುಲ್ ಅಕಬಕ್ಕೆ (ಇದು ಮಕ್ಕಃಕ್ಕೆ ಸಮೀಪ ವಿರುವ ಸ್ಥಂಭ) ಏಳು ಹರಳು ಕಲ್ಲುಗಳನ್ನು ಎಸೆಯಿರಿ. ಕಲ್ಲುಗಳನ್ನು ಒಂದಾದ ನಂತರ ಒಂದರಂತೆ ಪ್ರತಿ ಎಸೆತದಲ್ಲೂ **'ಅಲ್ಲಾಹು ಅಕ್ಬರ್'** ಎನ್ನುತ್ತಾ ಎಸೆಯಿರಿ.

**ಬಿ**. ಮೃಗವನ್ನು ಬಲಿ ನೀಡುವುದಿದ್ದರೆ ಅದನ್ನು ಬಲಿ ನೀಡಿರಿ. ಅದರಿಂದ ಸ್ವಲ್ಪ ಮಾಂಸವನ್ನು ಸೇವಿಸಿ ಉಳಿದುದನ್ನು ಅಗತ್ಯವುಳ್ಳವರಿಗೆ ಹಂಚಿರಿ.

ಸಿ. ತಲೆಯನ್ನು ಬೋಳಿಸಿರಿ ಅಥವಾ ಕೂದಲನ್ನು ಕಿರಿದುಗೊಳಿಸಿರಿ. ಪುರುಷರು ಬೋಳಿಸುವುದು ಉತ್ತಮ ವಾಗಿದೆ. ಸ್ತ್ರೀಯರು ಕೂದಲನ್ನು ಒಂದು ಬೆರಳಿನಷ್ಟು ಉದ್ದ ಕತ್ತರಿಸಬೇಕಾಗಿದೆ.

ಇವುಗಳನ್ನು ಮೇಲೆ ತಿಳಿಸಲಾದಂತೆ ಕ್ರಮಾನುಕ್ರಮವಾಗಿ ನಿರ್ವಹಿಸಿರಿ. ಆದರೆ ಕ್ರಮ ತಪ್ಪಿದರೆ ಅದರಲ್ಲೇನೂ ತೊಂದರೆಯಿಲ್ಲ.

ಕಲ್ಲುಗಳನ್ನೆಸೆದು ತಲೆಬೋಳಿಸಿದ ಅಥವಾ ಕೂದಲನ್ನು ಕಿರಿದುಗೊಳಿಸಿದ ಬಳಿಕ ಇಹ್ರಾಮ್‌ನ ನಿಷೇಧಗಳು ಎತ್ತಲ್ಪಡುತ್ತವೆ. ಆದರೆ ಪತ್ನಿಯೊಂದಿಗೆ ಲೈಂಗಿಕ ಸಂಬಂಧ ಹೊಂದುವುದರ ಹೊರತು. ಇದನ್ನು ಮೊದಲನೇ ತಹಲ್ಲುಲ್ (ಇಹ್ರಾಮಿನ ಸ್ಥಿತಿಯಿಂದ ಹೊರಬಂದು ಸಹಜ ಸ್ಥಿತಿಗೆ ಮರಳುವುದು) ಎನ್ನಲಾಗುತ್ತದೆ. ಈಗ ನಿಮಗೆ ನಿಮ್ಮ ಮಾಮೂಲಿ ವಸ್ತ್ರಗಳನ್ನು ಧರಿಸಬಹುದಾಗಿದೆ.

**7.** ತರುವಾಯ ಮಕ್ಕಃಕ್ಕೆ ತೆರಳಿ ತವಾಫ್ ಅಲ್‌ಇಫಾದಃ (ಈ ತವಾಫ್ ಹಜ್‌ನ ಪ್ರಮುಖ ಘಟಕವಾಗಿದೆ)ವನ್ನು ನಿರ್ವಹಿಸಿರಿ. ನೀವು ಹಜ್ ಅತ್ತಮತ್ತುಅ್ ನಿರ್ವಹಿಸುವವರಾಗಿದ್ದರೆ ಅದರೊಂದಿಗೆ (ತವಾಫ್ ಅಲ್‌ಇಫಾದಃದೊಂದಿಗೆ) ಸಅ್‌ಯನ್ನೂ ನಿರ್ವಹಿಸಿರಿ. ನೀವು ಹಜ್ ಅಲ್‌ಇಫ್ರಾದ್ ಅಥವಾ ಹಜ್ ಅಲ್‌ಕಿರಾನ್ ನಿರ್ವಹಿಸುವವರಾಗಿದ್ದರೆ ಮತ್ತು ನೀವು ತವಾಫ್ ಅಲ್‌ಕುದೂಮ್ (ಮಕ್ಕಃಕ್ಕೆ ಆಗಮಿಸುವಾಗ ಮಾಡುವ ತವಾಫ್)ನೊಂದಿಗೆ ಸಅ್‌ಯ್ ನಿರ್ವಹಿಸಿದ್ದರೆ ಪುನಃ

ಇನ್ನೊಂದು ಸಅ್‌ಯ್ ನಿರ್ವಹಿಸಬೇಕಾಗಿಲ್ಲ.

ಇದರೊಂದಿಗೆ ಇಹ್ರಾಮ್‌ನ ಎಲ್ಲ ನಿಷೇಧಗಳೂ ಎತ್ತಲ್ಪಡುತ್ತವೆ. ಪತ್ನಿಯೊಂದಿಗಿನ ಲೈಂಗಿಕ ಸಂಪರ್ಕ ಕೂಡ.

ಮಿನಾದಲ್ಲಿ ತಂಗುವ ದಿನಗಳು ಕಳೆಯುವವರೆಗೆ ತವಾಫ್ ಅಲ್‌ಇಫಾದಃ ಮತ್ತು ಸಅ್‌ಯನ್ನು ಮುಂದೂಡುವುದಕ್ಕೆ ಅನುಮತಿಯಿದೆ.

**8**. ಬಲಿದಿನದಂದು ತವಾಫ್ ಅಲ್‌ಇಫಾದಃ ಮತ್ತು ಸಅ್‌ಯ್ ನಿರ್ವಹಿಸಿದ ನಂತರ ಮಿನಾಗೆ ಮರಳಿ ದುಲ್‌ಹಿಜ್ಜಃ 11, 12 ಮತ್ತು 13ರ ರಾತ್ರಿಗಳನ್ನು (ಅಯ್ಯಾಮುತ್ತಶ್ರೀಕ್ ಎಂದು ಕರೆಯಲಾಗುವ ಬಲಿದಿನದ ನಂತರದ ಮೂರು ದಿನಗಳು) ಅಲ್ಲಿ ಕಳೆಯಿರಿ. ನೀವು ಆತುರಪಟ್ಟು ದುಲ್‌ಹಿಜ್ಜಃ 12ರಂದು ನಿರ್ಗಮಿಸಿದರೆ ಅದರಲ್ಲೇನೂ ತೊಂದರೆಯಿಲ್ಲ.

**9**. ನೀವು ಮಿನಾದಲ್ಲಿ ತಂಗುವ ಎರಡು ಅಥವಾ ಮೂರು ದಿನಗಳಂದು ಪ್ರತಿದಿನವೂ ಮಧ್ಯಾಹ್ನ ಝುವಾಲ್‌ನ (ನಡುಹಗಲಿನ) ನಂತರ ಮೊದಲನೆ ಸ್ಥಂಭದಿಂದ (ಅಂದರೆ ಮಕ್ಕದಿಂದ ವಿದೂರವಾಗಿರುವ ಸ್ಥಂಭದಿಂದ) ತೊಡಗಿ, ಮಧ್ಯಸ್ಥಂಭ ಮತ್ತು ಕೊನೆಗೆ

ಅಕಬ ಸ್ಥಂಭಕ್ಕೆ (ಜಮ್ರತುಲ್ ಅಕಬಕ್ಕೆ) ಕಲ್ಲುಗಳನ್ನು ಎಸೆಯಿರಿ. 'ಅಲ್ಲಾಹು ಅಕ್ಬರ್' ಎನ್ನುತ್ತಾ ಪ್ರತಿಯೊಂದು ಸ್ಥಂಭಕ್ಕೂ ಒಂದರ ನಂತರ ಒಂದರಂತೆ ಏಳು ಕಲ್ಲುಗಳನ್ನು ಎಸೆಯಿರಿ.

ಮೊದಲನೆ ಸ್ಥಂಭಕ್ಕೆ ಎಸೆದ ನಂತರ ಮತ್ತು ಎರಡನೆ ಸ್ಥಂಭಕ್ಕೆ ಎಸೆದ ನಂತರ ಸ್ವಲ್ಪ ವಿಳಂಬಿಸಿ ಕಿಬ್ಲಕ್ಕೆ ಮುಖಮಾಡಿ ಕೈಗಳನ್ನೆತ್ತಿ ನಿಮ್ಮ ಬಯಕೆಗಳನ್ನು ಅಲ್ಲಾಹನೊಂದಿಗೆ ಬೇಡಿರಿ. ಆದರೆ ಮೂರನೆ ಸ್ಥಂಭಕ್ಕೆ ಎಸೆದ ನಂತರ ಪ್ರಾರ್ಥನೆ ಮಾಡುವುದಕ್ಕಾಗಿ ನಿಲ್ಲಬಾರದು.

ನೀವು ಎರಡೇ ದಿನಗಳಲ್ಲಿ ಮಿನಾದಿಂದ ನಿರ್ಗಮಿಸುವುದಾದರೆ ಎರಡನೆ ದಿನದ ಸೂರ್ಯಾಸ್ತಕ್ಕೆ ಮುಂಚೆ ಮಿನಾವನ್ನು ತೊರೆಯಿರಿ. ನೀವು ನಿರ್ಗಮಿಸುವುದಕ್ಕೆ ಮೊದಲೇ ಸೂರ್ಯಾಸ್ತವಾಗಿ ಬಿಟ್ಟರೆ ನೀವು ಮೂರನೇ ರಾತ್ರಿಯೂ ಮಿನಾದಲ್ಲಿ ತಂಗಬೇಕಾಗಿದೆ ಮತ್ತು ಮರುದಿನ ಪುನಃ ಕಲ್ಲೆಸೆಯಬೇಕಾಗಿದೆ. ಏನೇ ಆದರೂ ಮೂರು ರಾತ್ರಿಗಳ ನಂತರವೇ ಮಿನಾದಿಂದ ನಿರ್ಗಮಿಸುವುದು ಸೂಕ್ತವಾಗಿದೆ.

ರೋಗಿಗಳು ಮತ್ತು ಬಲಹೀನರು ತಮಗಾಗಿ ಕಲ್ಲೆಸೆಯಲು ಬೇರೊಬ್ಬ ವ್ಯಕ್ತಿಯನ್ನು ನೇಮಿಸುವುದಕ್ಕೆ

ಅನುಮತಿಯಿದೆ. ಆ ವ್ಯಕ್ತಿ ಪ್ರತಿಯೊಂದು ಸ್ಥಂಭದ ಬಳಿಯೂ ಮೊದಲು ತನ್ನ ಪರವಾಗಿ ಎಸೆದು ಬಳಿಕ ಅವನ (ರೋಗಿಯ ಅಥವಾ ದುರ್ಬಲನ) ಪರವಾಗಿ ಎಸೆಯಬೇಕಾಗಿದೆ.

10. ಹಜ್ ಕರ್ಮಗಳನ್ನು ಪೂರ್ತಿಗೊಳಿಸಿದ ನಂತರ ನೀವು ನಿಮ್ಮ ದೇಶಗಳಿಗೆ ಮರಳಲು ನಿರ್ಧರಿಸಿದರೆ ಮಕ್ಕಾ ತೊರೆಯುವುದಕ್ಕೆ ಮುಂಚೆ ತವಾಫ್ ಅಲ್‌ವದಾಅ್ (ವಿದಾಯದ ತವಾಫ್) ನಿರ್ವಹಿಸಬೇಕಾಗಿದೆ. ಮುಟ್ಟಾಗಿರುವ ಅಥವಾ ಹೆರಿಗೆರಕ್ತ ಹೊಂದಿರುವ ಸ್ತ್ರೀಯರ ಹೊರತು ಇತರ ಯಾರಿಗೂ ಇದರಿಂದ ವಿನಾಯಿತಿಯನ್ನು ನೀಡಲಾಗಿಲ್ಲ.

# ಇಹ್ರಾಮಿನ ವೇಳೆಯಲ್ಲಿ ಕಡ್ಡಾಯವಾಗಿ ಪಾಲಿಸಬೇಕಾದ ವಿಷಯಗಳು

ಇಹ್ರಾಮಿನ ಸ್ಥಿತಿಯಲ್ಲಿರುವಾಗ ಈ ಕೆಳಗಿನ ವಿಷಯಗಳನ್ನು ಕಡ್ಡಾಯವಾಗಿ ಪಾಲಿಸಿರಿ.

**1**. ಅಲ್ಲಾಹು ಕಡ್ಡಾಯಗೊಳಿಸಿರುವ ಎಲ್ಲ ವಿಷಯಗಳನ್ನು, ಉದಾಹರಣೆಗೆ ಐದು ವೇಳೆಯ ಪ್ರಾರ್ಥನೆಗಳನ್ನು ಸಾಮೂಹಿಕವಾಗಿ ನಿರ್ವಹಿಸುವುದು ಇತ್ಯಾದಿ ಚಾಚೂ ತಪ್ಪದೆ ಪಾಲಿಸಿರಿ.

**2**. ಅಲ್ಲಾಹು ವಿರೋಧಿಸಿದ ಕಾರ್ಯಗಳಿಂದ, ಉದಾಹರಣೆಗೆ ಅಶ್ಲೀಲತೆ, ಪಾಪವೆಸಗುವುದು, ಜಗಳವಾಡುವುದು ಇತ್ಯಾದಿಗಳನ್ನು ವರ್ಜಿಸಿರಿ.

**3**. ಮಾತು ಅಥವಾ ಪ್ರವೃತ್ತಿಯ ಮೂಲಕ ಸಹ ಮುಸ್ಲಿಮರನ್ನು ಪೀಡಿಸುವುದು ಅಥವಾ ನೋಯಿಸುವುದರ ಕುರಿತು ಎಚ್ಚರ ವಹಿಸಿರಿ.

**4**. ಇಹ್ರಾಮಿನ ಸ್ಥಿತಿಯಲ್ಲಿ ನಿಷಿದ್ಧವಾಗಿರುವ ಈ ಕೆಳಗಿನ ಕಾರ್ಯಗಳನ್ನು ವರ್ಜಿಸಿರಿ:

**ಎ.** ಉಗುರನ್ನು ಕತ್ತರಿಸದಿರಿ ಮತ್ತು ಕೂದಲನ್ನು ಕೀಳದಿರಿ. ಕೂದಲು ತನ್ನಷ್ಟಕ್ಕೆ ತುಂಡಾಗಿ ಉದುರಿದರೆ ಅದರಲ್ಲಿ ತೊಂದರೆಯಿಲ್ಲ.

**ಬಿ.** ವಸ್ತ್ರಗಳಲ್ಲಾಗಲಿ, ಶರೀರದಲ್ಲಾಗಲಿ, ಆಹಾರಗಳ ಲ್ಲಾಗಲಿ, ಪಾನೀಯಗಳಲ್ಲಾಗಲಿ ಸುವಾಸನೆ ಅಥವಾ ಪರಿಮಳ ವಸ್ತುಗಳನ್ನು ಬಳಸದಿರಿ. ಆದರೆ ಇಹ್ರಾಮ್ ಧರಿಸುವ ಸಂದರ್ಭ ಹಚ್ಚಿದ ಸುಗಂಧದ ಪರಿಮಳ ಬಾಕಿಯಾಗಿದ್ದರೆ ಅದರಲ್ಲಿ ತೊಂದರೆಯಿಲ್ಲ.

ಸಿ. ಇಹ್ರಾಮಿನ ಸ್ಥಿತಿಯಲ್ಲಿರುವಷ್ಟು ಕಾಲ ಪ್ರಾಣಿ ಯನ್ನು ಕೊಲ್ಲುವುದಾಗಲಿ, ಬೆದರಿಸುವುದಾಗಲಿ, ಬೇಟೆಯಾಡುವುದಾಗಲಿ ಅಥವಾ ಬೇಟೆಯಲ್ಲಿ ಸಹಕರಿಸುವುದಾಗಲಿ ಮಾಡದಿರಿ.

**ಡಿ.** ತನಗಾಗಿ ಅಥವಾ ತನ್ನ ಪ್ರಯುಕ್ತ ಯಾರಿಗಾ ದರೂ ಓರ್ವ ಸ್ತ್ರೀಯ ವಿವಾಹ ಪ್ರಸ್ತಾಪ ಮಾಡ ಕೂಡದು. ಲೈಂಗಿಕ ಸಂಪರ್ಕ, ಸರಸ ಮತ್ತು ಕಾಮಕೇಳಿಗಳು ನಿಷಿದ್ಧವಾಗಿವೆ. ಇಹ್ರಾಮಿನ ಸ್ಥಿತಿ ಯಲ್ಲಿರುವಾಗ ಇವೆಲ್ಲ ಕಾರ್ಯಗಳು ನಿಷಿದ್ಧ ವಾಗಿವೆ ಮತ್ತು ಇವು ಪುರುಷರಿಗೆ ಮತ್ತು ಸ್ತ್ರೀಯರಿಗೆ ಸಮಾನವಾಗಿ ಬಾಧಕವಾಗುತ್ತವೆ.

ಈ ಕೆಳಗಿನ ವಿಷಯಗಳು ಕೇವಲ ಪುರುಷರಿಗೆ ಮಾತ್ರ ಬಾಧಕವಾಗುತ್ತವೆ:

**ಎ.** ಪುರುಷನು ತನ್ನ ತಲೆಯನ್ನು ಸ್ಪರ್ಶಿಸಿಕೊಳ್ಳು ವಂತಹ ಯಾವುದೇ ವಸ್ತುವಿನಿಂದ ತನ್ನ ತಲೆಯನ್ನು ಮರೆಮಾಚಕೂಡದು. ಆದರೆ ಕೊಡೆಯ ಅಡಿಯಲ್ಲಿ ನಿಲ್ಲುವುದು ಅಥವಾ ಕಾರಿನೊಳಗೆ ಕೂರುವುದು ಅಥವಾ ತಲೆಯ ಮೇಲೆ ಏನಾದರೂ ಹೊತ್ತುಕೊಳ್ಳುವುದು ಅನುಮತಿಸಲ್ಪಟ್ಟಿದೆ.

**ಬಿ.** ಪುರುಷನು ಅಂಗಿಯನ್ನು ಧರಿಸಕೂಡದು ಅಥವಾ ತನ್ನ ಶರೀರವನ್ನು ಪೂರ್ಣವಾಗಿ ಅಥವಾ ಭಾಗಶಃ ಮರೆಮಾಚುವ ಉಡುಪು ಧರಿಸಕೂಡದು. ಮುಸುಕು ವಸ್ತ್ರ (ಬುರ್ನೂಸ್), ರುಮಾಲು, ಪ್ಯಾಂಟು, ಬೂಟು (ಖುಫ್ಫ್) ಧರಿಸಕೂಡದು. ಆದರೆ ಇಝಾರ್ ದೊರೆಯದಿದ್ದರೆ ಪ್ಯಾಂಟು ಧರಿಸುವುದು ಅನುಮತಿಸಲಾಗಿದೆ. ಹಾಗೆಯೇ, ಚಪ್ಪಲಿ ದೊರೆಯದಿದ್ದರೆ ಬೂಟು ಧರಿಸುವುದು ಅನುಮತಿಸಲಾಗಿದೆ.

ಇಹ್ರಾಮಿನ ಸ್ಥಿತಿಯಲ್ಲಿರುವಾಗ ಕೈಕವಚ ಧರಿಸುವುದು, ಮುಖವನ್ನು ಮರೆಮಾಚಲು ನಿಕಾಬ್ ಧರಿಸುವುದು ಸ್ತ್ರೀಗೆ ವಿರೋಧಿಸಲಾಗಿದೆ. ಆದರೆ ಅನ್ಯಪುರುಷರ ಸಮ್ಮುಖ

ದಲ್ಲಿರುವಾಗ ಆಕೆ ಇಹ್ರಾಮ್‌ನ ಹೊರತಾದ ಸ್ಥಿತಿಯಲ್ಲಿರುವಾಗ ಮಾಡುವಂತೆ ಶಿರವಸ್ತ್ರ ಅಥವಾ ಇತರ ವಸ್ತ್ರದಿಂದ ಮುಖವನ್ನು ಮರೆಮಾಚಬೇಕಾಗಿದೆ.

ಇಹ್ರಾಮಿನ ಸ್ಥಿತಿಯಲ್ಲಿರುವಾಗ (ಪುರುಷನು) ಮರೆವಿನಿಂದ ಅಥವಾ ಅಜ್ಞಾನದಿಂದ ಹೊಲಿದ ವಸ್ತ್ರವನ್ನು ಧರಿಸಿದರೆ, ತಲೆಯನ್ನು ಮರೆಮಾಚಿದರೆ, ಸುಗಂಧವನ್ನು ಲೇಪಿಸಿದರೆ, ಕೂದಲನ್ನು ಕಿತ್ತರೆ ಅಥವಾ ಉಗುರನ್ನು ಕತ್ತರಿಸಿದರೆ ಅವನ ಮೇಲೆ ಯಾವ ಪ್ರಾಯಶ್ಚಿತ್ತವೂ ಇಲ್ಲ. ಜ್ಞಾಪಕವಾದ ತಕ್ಷಣ ಅಥವಾ ಇತರರು ತಿಳಿಸಿಕೊಟ್ಟ ತಕ್ಷಣ ಅವನು ಅದನ್ನು ತೊರೆಯಬೇಕಾಗಿದೆ.

ಚಪ್ಪಲಿ, ಉಂಗುರ, ಕನ್ನಡಕ, ಶ್ರವಣ ಸಾಧನ, ಕೈಗಡಿಯಾರ, ತನ್ನ ಹಣ ಅಥವಾ ದಾಖಲೆಗಳನ್ನು ಸುರಕ್ಷಿತವಾಗಿಸಲು ಬೆಲ್ಟ್ ಧರಿಸುವುದು ಇತ್ಯಾದಿ ಅನುಮತಿಸಲಾಗಿದೆ.

ತನ್ನ ವಸ್ತ್ರವನ್ನು ಬದಲಾಯಿಸುವುದು, ತೊಳೆಯುವುದು ಅಥವಾ ತನ್ನ ಶರೀರವನ್ನು ಮತ್ತು ತಲೆಯನ್ನು ತೊಳೆಯುವುದು ಅನುಮತಿಸಲಾಗಿದೆ. ತಲೆ ತೊಳೆಯುವಾಗ ಕೂದಲು ಉದುರಿದರೆ ಅದರಲ್ಲಿ ತೊಂದರೆಯಿಲ್ಲ.

# ಪ್ರವಾದಿ(ﷺ)ರವರ ಮಸೀದಿ ಸಂದರ್ಶನ

**1**. ಪ್ರವಾದಿ(ﷺ)ರವರ ಮಸೀದಿಯನ್ನು ಸಂದರ್ಶಿಸಬೇಕೆಂಬ ಮತ್ತು ಅಲ್ಲಿ ನಮಾಝ್ ನಿರ್ವಹಿಸಬೇಕೆಂಬ ಉದ್ದೇಶದಿಂದ ವರ್ಷದ ಯಾವುದೇ ಅವಧಿಯಲ್ಲಿ ಮದೀನಕ್ಕೆ ತೆರಳುವುದು ಸುನ್ನತ್ತಾಗಿದೆ. ಪ್ರವಾದಿ(ﷺ)ರವರ ಮಸೀದಿಯಲ್ಲಿ ಮಾಡುವ ಒಂದು ನಮಾಝ್ ಮಕ್ಕಾದಲ್ಲಿರುವ ಮಸ್ಜಿದುಲ್ ಹರಾಮ್ ಅಲ್ಲದ ಇತರ ಮಸೀದಿಗಳಲ್ಲಿ ಮಾಡುವ ಒಂದು ಸಾವಿರ ನಮಾಝ್‌ಗಿಂತಲೂ ಶ್ರೇಷ್ಠವಾಗಿದೆ.

**2**. ಪ್ರವಾದಿ(ﷺ)ರವರ ಮಸೀದಿಗೆ ತೆರಳುವಾಗ ಇಹ್ರಾಮ್ ಅಥವಾ ತಲ್ಬಿಯಃ ಇಲ್ಲ. ಯಾಕೆಂದರೆ ಮದೀನ ಸಂದರ್ಶನಕ್ಕೆ ಹಜ್ಜ್‌ನೊಂದಿಗೆ ಯಾವ ಸಂಬಂಧವೂ ಇಲ್ಲ.

**3**. ಪ್ರವಾದಿ(ﷺ)ರವರ ಮಸೀದಿಯನ್ನು ಪ್ರವೇಶಿಸುವಾಗ ಬಲಗಾಲಿಟ್ಟು **'ಬಿಸ್ಮಿಲ್ಲಾಹ್'** ಎನ್ನುತ್ತಾ ಪ್ರವೇಶಿಸಿರಿ. ತರುವಾಯ ಪ್ರವಾದಿ(ﷺ)ರವರ ಮೇಲೆ ಸಲಾತ್ ಮತ್ತು ಸಲಾಮ್‌ಗಳನ್ನು ಹೇಳಿರಿ. ತರುವಾಯ ಕಾರುಣ್ಯದ

ಬಾಗಿಲುಗಳನ್ನು ತೆರೆದು ಕೊಡುವಂತೆ ಅಲ್ಲಾಹನೊಂದಿಗೆ ಪ್ರಾರ್ಥಿಸಿರಿ. ತರುವಾಯ ಹೀಗೆನ್ನಿರಿ:

أَعُوذُ بِاللَّهِ الْعَظِيمِ وَوَجْهِهِ الْكَرِيمِ وَسُلْطَانِهِ الْقَدِيمِ مِنَ الشَّيْطَانِ الرَّجِيمِ اللَّهُمَّ افْتَحْ لِي أَبْوَابَ رَحْمَتِكَ

**“ಅಊದು ಬಿಲ್ಲಾಹಿಲ್ ಅದೀಮಿ ವವಜ್‌ಹಿಹಿಲ್ ಕರೀಮಿ ವಸುಲ್ತಾನಿಹಿಲ್ ಕದೀಮಿ ಮಿನ ಶ್ಶೈತಾನಿ ರ್ರಜೀಮಿ ಅಲ್ಲಾಹುಮ್ಮಫ್ತಹ್ ಲೀ ಅಬ್ವಾಬ ರಹ್ಮತಿಕ್”**

(ಮಹಾನನಾದ ಅಲ್ಲಾಹನೊಂದಿಗೆ, ಅವನ ಗೌರವ ಪೂರ್ಣ ಮುಖದೊಂದಿಗೆ ಮತ್ತು ಅವನ ಶಾಶ್ವತವಾದ ಅಧಿಕಾರದೊಂದಿಗೆ ಬಹಿಷ್ಕೃತನಾದ ಶೈತಾನನಿಂದ ನಾನು ಅಭಯವನ್ನು ಯಾಚಿಸುತ್ತಿರುವೆನು. ಓ ಅಲ್ಲಾಹ್! ನಿನ್ನ ಕಾರುಣ್ಯದ ಬಾಗಿಲುಗಳನ್ನು ನನಗೆ ತೆರೆದು ಕೊಡು)

ಇತರ ಯಾವುದೇ ಮಸೀದಿಯನ್ನು ಪ್ರವೇಶಿಸುವಾಗ ಹೇಳುವಂತೆಯೇ ಹೇಳಿರಿ.

4. ಮಸೀದಿಯನ್ನು ಪ್ರವೇಶಿಸಿದ ಕೂಡಲೇ

ಎರಡು ರಕ್‌ಅತ್ ತಹಿಯ್ಯತ್ ನಮಾಝ್ ಮಾಡಿರಿ. ಸಾಧ್ಯವಾದರೆ ಇದನ್ನು ರೌದಾದಲ್ಲಿ ನಿರ್ವಹಿಸಿರಿ. ಅದು ಸಾಧ್ಯವಾಗದಿದ್ದಲ್ಲಿ ಮಸೀದಿಯ ಯಾವುದೇ ಭಾಗದಲ್ಲೂ ನಿರ್ವಹಿಸಬಹುದು.

**5.** ತರುವಾಯ ಪ್ರವಾದಿ(ﷺ)ರವರ ಗೋರಿಯ ಬಳಿ ತೆರಳಿ ಅದಕ್ಕೆ ಮುಖಮಾಡಿ ಅದರ ಎದುರು ನಿಂತು ಅತ್ಯಂತ ಗೌರವಾದರದೊಂದಿಗೆ ತಗ್ಗಿದ ಧ್ವನಿಯಲ್ಲಿ ಹೇಳಿರಿ:

السَّلَامُ عَلَيْكَ أَيُّهَا النَّبِيُّ وَرَحْمَةُ اللَّهِ وَبَرَكَاتُهُ

**“ಅಸ್ಸಲಾಮು ಅಲೈಕ ಅಯ್ಯುಹ ನ್ನಬಿಯ್ಯು ವರಹ್ಮತುಲ್ಲಾಹಿ ವಬರಕಾತುಹೂ”**

(ಓ ಪ್ರವಾದಿಯವರೇ! ತಮ್ಮ ಮೇಲೆ ಅಲ್ಲಾಹನ ಶಾಂತಿ, ಕರುಣೆ ಮತ್ತು ಸಮೃದ್ಧಿಗಳು ವರ್ಷಿಸುತ್ತಿರಲಿ)

ತರುವಾಯ ಪ್ರವಾದಿ(ﷺ)ರವರ ಮೇಲೆ ಸಲಾತ್ ಹೇಳಿರಿ. ಇದರೊಂದಿಗೆ ಈ ಕೆಳಗಿನ ಪ್ರಾರ್ಥನೆಯನ್ನು ಸೇರಿಸುವುದರಲ್ಲಿ ತೊಂದರೆಯಿಲ್ಲ.

اللَّهُمَّ آتِهِ الْوَسِيلَةَ وَالْفَضِيلَةَ وَابْعَثْهُ الْمَقَامَ

الْمَحْمُودَ الَّذِي وَعَدْتَهُ اللَّهُمَّ اجْزِهِ عَنْ أَمَّتِهِ أَفْضَلَ الْجَزَاءِ

**"ಅಲ್ಲಾಹುಮ್ಮ ಆತಿಹಿಲ್ ವಸೀಲತ ವಲ್‌ಫದೀಲತ ವಬ್‌ಅಸ್‌ಹುಲ್ ಮಕಾಮಲ್ ಮಹ್ಮೂದಲ್ಲದೀ ವಅದ್‌ತ್ತಹೂ, ಅಲ್ಲಾಹುಮ್ಮಜ್‌ಝಿಹೀ ಅನ್ ಉಮ್ಮತಿಹೀ ಅಫ್‌ದಲಲ್ ಜಝಾಅ್"**

(ಓ ಅಲ್ಲಾಹ್! ಪ್ರವಾದಿ(ﷺ)ರವರಿಗೆ ವಸೀಲ ಮತ್ತು ಫದೀಲವನ್ನು ನೀಡು. ನೀನು ವಾಗ್ದಾನ ಮಾಡಿದ ಮಕಾಮುಲ್ ಮಹ್ಮೂದ್‌ಗೆ ಅವರನ್ನು ನಿಯೋಗಿಸು. ಓ ಅಲ್ಲಾಹ್! ಅವರಿಗೆ ಅವರ ಸಮುದಾಯದ ಪರವಾಗಿ ಅತ್ಯುತ್ತಮವಾದ ಪ್ರತಿಫಲವನ್ನು ನೀಡು)

ತರುವಾಯ ಸ್ವಲ್ಪ ಬಲಬದಿಗೆ ಸರಿದು ಅಬೂಬಕ್ರ್ (رضي الله عنه)ರವರ ಗೋರಿಯ ಬಳಿ ನಿಲ್ಲಿರಿ. ಅಲ್ಲಿ ಅವರಿಗೆ ಸಲಾಮ್ ಹೇಳಿರಿ ಮತ್ತು ಅವರಿಗೆ ಕರುಣೆ, ಪಾಪಮುಕ್ತಿ ಮತ್ತು ಸೌಭಾಗ್ಯ ಕರುಣಿಸುವಂತೆ ಅಲ್ಲಾಹನೊಂದಿಗೆ ಪ್ರಾರ್ಥಿಸಿರಿ.

ತರುವಾಯ ಸ್ವಲ್ಪ ಬಲಬದಿಗೆ ಸರಿದು ಉಮರ್(رضي الله عنه)

ರವರ ಗೋರಿಯ ಬಳಿ ನಿಲ್ಲಿರಿ. ಅಲ್ಲಿ ಅವರಿಗೆ ಸಲಾಮ್ ಹೇಳಿರಿ ಮತ್ತು ಅವರಿಗೆ ಕರುಣೆ, ಪಾಪಮುಕ್ತಿ ಮತ್ತು ಸೌಭಾಗ್ಯ ಕರುಣಿಸುವಂತೆ ಅಲ್ಲಾಹನೊಂದಿಗೆ ಪ್ರಾರ್ಥಿಸಿರಿ.

**6.** ವುದೂ ನಿರ್ವಹಿಸಿ ಕುಬಾ ಮಸೀದಿಯನ್ನು ಪ್ರವೇಶಿಸಿ ಅಲ್ಲಿ ನಮಾಝ್ ನಿರ್ವಹಿಸಿರಿ. ಪ್ರವಾದಿ(ﷺ) ರವರು ಅಲ್ಲಿ ನಮಾಝ್ ಮಾಡಿದ್ದಾರೆ ಮತ್ತು ನಮಾಝ್ ನಿರ್ವಹಿಸುವಂತೆ ಪ್ರೇರೇಪಿಸಿದ್ದಾರೆ.

**7.** ಬಕೀಅ್ ಕಬರಸ್ಥಾನವನ್ನು ಸಂದರ್ಶಿಸುವುದು ಸುನ್ನತ್ತಾಗಿದೆ. ಅಲ್ಲಿ ಉಸ್ಮಾನ್(رضي الله عنه)ರವರ ಗೋರಿಯಿದೆ. ಹಾಗೆಯೇ ಉಹುದ್ ಯುದ್ಧದಲ್ಲಿ ಹುತಾತ್ಮರಾದ ಹಂಝ(رضي الله عنه)ರವರ ಗೋರಿಯಿದೆ. ಅವರಿಗೆ ಸಲಾಮ್ ಹೇಳಿರಿ ಮತ್ತು ಅವರಿಗೋಸ್ಕರ ಅಲ್ಲಾಹನೊಂದಿಗೆ ಪ್ರಾರ್ಥಿಸಿರಿ. ಪ್ರವಾದಿ(ﷺ)ರವರು ಅಲ್ಲಿ ಎಲ್ಲ ಗೋರಿಗಳನ್ನೂ ಸಂದರ್ಶಿಸಿ ಅವರಿಗೋಸ್ಕರ ಪ್ರಾರ್ಥಿಸುತ್ತಿದ್ದರು. ಗೋರಿ ಸಂದರ್ಶಿಸುವಾಗ ಹೀಗೆ ಹೇಳಬೇಕೆಂದು ಪ್ರವಾದಿ(ﷺ) ರವರು ತಮ್ಮ ಅನುಯಾಯಿಗಳಿಗೆ ಕಲಿಸಿದ್ದಾರೆ:

السَّلَامُ عَلَيْكُمْ أَهْلَ الدِّيَارِ مِنَ الْمُؤْمِنِينَ
وَالْمُسْلِمِينَ وَإِنَّا إِنْ شَاءَ اللَّهُ بِكُمْ لَاحِقُونَ

نَسْأَلُ اللَّهَ لَنَا وَلَكُمُ الْعَافِيَةَ

**“ಅಸ್ಸಲಾಮು ಅಲೈಕುಮ್ ಅಹ್ಲ ದ್ದಿಯಾರಿ ಮಿನಲ್ ಮುಅ್‌ಮಿನೀನ ವಲ್ ಮುಸ್ಲಿಮೀನ ವಇನ್ನಾ ಇನ್‌ಶಾ ಅಲ್ಲಾಹು ಬಿಕುಮ್ ಲಾಹಿಕೂನ್ ನಸ್‌ಅಲುಲ್ಲಾಹ ಲನಾ ವಲಕುಮುಲ್ ಆಫಿಯಃ”**

(ವಿಶ್ವಾಸಿಗಳು ಮತ್ತು ಮುಸ್ಲಿಮರಲ್ಲಿ ಸೇರಿದ ಓ ಗೋರಿಯ ನಿವಾಸಿಗಳೇ! ನಿಮ್ಮ ಮೇಲೆ ಶಾಂತಿಯಿರಲಿ. ಅಲ್ಲಾಹು ಇಚ್ಛಿಸಿದರೆ ಖಂಡಿತವಾಗಿಯೂ ನಾವು ನಿಮ್ಮೊಂದಿಗೆ ಸೇರಿಕೊಳ್ಳುವೆವು. ನಮಗೆ ಮತ್ತು ನಿಮಗೆ ಸೌಖ್ಯ ನೀಡುವಂತೆ ನಾವು ಅಲ್ಲಾಹನೊಂದಿಗೆ ಪ್ರಾರ್ಥಿಸುತ್ತಿರುವೆವು)

ಶರೀಅತ್ ಕಲಿಸಿಕೊಡುವ ಪ್ರಕಾರ ಈ ಮೇಲೆ ಹೇಳಲಾದ ಮಸೀದಿ ಮತ್ತು ಸ್ಥಳಗಳ ಹೊರತು ಸಂದರ್ಶಿಸಬೇಕಾದ ಇತರ ಮಸೀದಿಗಳು ಅಥವಾ ಸ್ಥಳಗಳು ಮದೀನದಲ್ಲಿಲ್ಲ. ಆದ್ದರಿಂದ ಪುಣ್ಯ ಸಿಗದಂತಹ ಅಥವಾ ಅವುಗಳನ್ನು ಸಂದರ್ಶಿಸಿದ ಕಾರಣ ಆಕ್ಷೇಪಾರ್ಹವಾಗುವಂತಹ ಸ್ಥಳಗಳನ್ನು ಸಂದರ್ಶಿಸಿ ನಿಮ್ಮ ಮೇಲೆಯೇ ಹೊರೆ ಹೊರಿಸದಿರಿ. ಎಲ್ಲ ಮಾರ್ಗದರ್ಶನಗಳು ಅಲ್ಲಾಹನಿಂದಲೇ ಆಗಿದೆ.

# ಯಾತ್ರಾರ್ಥಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಪ್ರಮಾದಗಳು

## ಒಂದು: ಇಹ್ರಾಮ್‌ಗೆ ಸಂಬಂಧಿಸಿದ ಪ್ರಮಾದಗಳು:

ಕೆಲವು ಯಾತ್ರಾರ್ಥಿಗಳು ಇಹ್ರಾಮ್ ಪ್ರವೇಶಿಸದೆಯೇ ನಿಗದಿತ ಮೀಕಾತ್‌ಗಳನ್ನು ದಾಟುತ್ತಾರೆ ಅಥವಾ ದಾಟಿದ ನಂತರ ಇಹ್ರಾಮ್ ಪ್ರವೇಶಿಸುತ್ತಾರೆ. ಅವರು ಜಿದ್ದಾ ಅಥವಾ ಇಹ್ರಾಮಿನ ಮೀಕಾತ್‌ನೊಳಗೆ ಸೇರಿರುವ ಇತರ ಸ್ಥಳಗಳನ್ನು ತಲುಪುವವರೆಗೆ ಕಾಯುತ್ತಾರೆ. ತರುವಾಯ ಅಲ್ಲಿಂದ ಇಹ್ರಾಮ್ ಪ್ರವೇಶಿಸುತ್ತಾರೆ. ಇದು ಪ್ರವಾದಿ (ﷺ)ರವರ ಆದೇಶಕ್ಕೆ ವಿರುದ್ಧವಾಗಿದೆ. ಇಹ್ರಾಮನ್ನು ತನ್ನ ಹಾದಿಯ ಮಧ್ಯೆ ಬರುವ ಮೀಕಾತ್‌ನಿಂದಲೇ ಪ್ರವೇಶಿಸಬೇಕೆಂದು ಪ್ರವಾದಿ(ﷺ)ರವರು ಆದೇಶಿಸಿದ್ದಾರೆ.

ಇಹ್ರಾಮ್ ಪ್ರವೇಶಿಸದೆಯೇ ಯಾರಾದರೂ ತನ್ನ ಹಾದಿಯಲ್ಲಿ ಬರುವ ಮೀಕಾತನ್ನು ದಾಟಿದರೆ ಅವನು ಪುನಃ ಮೀಕಾತ್‌ನತ್ತ ಮರಳಿ ಅಲ್ಲಿಂದಲೇ ಇಹ್ರಾಮ್ ಪ್ರವೇಶಿಸಬೇಕಾಗಿದೆ. ಅಥವಾ ಅವನು ಕುರಿಯೊಂದನ್ನು

ಬಲಿನೀಡಿ ಅದರ ಮಾಂಸವೆಲ್ಲವನ್ನೂ ಬಡವರಿಗೆ ನೀಡಬೇಕಾದ ಪ್ರಾಯಶ್ಚಿತ್ತವನ್ನು ಕೈಗೊಳ್ಳಬೇಕಾಗಿದೆ. ವಾಯು, ಸಮುದ್ರ ಮತ್ತು ನೆಲದ ಮೂಲಕ ಆಗಮಿಸುವ ಎಲ್ಲ ಯಾತ್ರಾರ್ಥಿಗಳಿಗೂ ಇದು ಅನ್ವಯಿಸುತ್ತದೆ.

ಮಕ್ಕಾದೆಡೆಗಿರುವ ಹಾದಿಯ ಮಧ್ಯೆ ಓರ್ವನಿಗೆ ಈ ಮೀಕಾತ್ ಲಭ್ಯವಲ್ಲದಿದ್ದರೆ ಅವನು ತನಗೆ ಅತಿ ಹತ್ತಿರವಿರುವ ಮೀಕಾತ್‌ನೆಡೆಗೆ ಚಲಿಸಬೇಕಾಗಿದೆ.

**ಎರಡು: ತವಾಫ್‌ಗೆ ಸಂಬಂಧಿಸಿದ ಪ್ರಮಾದಗಳು:**

**1**. ಹಜರುಲ್ ಅಸ್ವದ್‌ನ ಮುಂದಿನಿಂದ ತವಾಫ್ ಆರಂಭಿಸುವುದು. ಹಜರುಲ್ ಅಸ್ವದ್‌ನಿಂದಲೇ ತವಾಫ್ ಆರಂಭಿಸುವುದು ಕಡ್ಡಾಯವಾಗಿದೆ.

**2**. ಹಿಜ್ರ್‌ನೊಳಗಿನಿಂದ ತವಾಫ್ ಮಾಡುವುದು. ಹೀಗೆ ತವಾಫ್ ಮಾಡಿದರೆ ಕಅ್‌ಬಾಗೆ ಪೂರ್ಣವಾಗಿ ತವಾಫ್ ಮಾಡದೆ ಅದರ ಒಂದು ಭಾಗಕ್ಕೆ ಮಾತ್ರ ತವಾಫ್ ಮಾಡಿದಂತಾಗುತ್ತದೆ. ಯಾಕೆಂದರೆ ಹಿಜ್ರ್ ಕಅ್‌ಬಾದ ಒಂದು ಭಾಗವಾಗಿದೆ. ಹಿಜ್ರ್‌ನ ಒಳಭಾಗದಿಂದ ಮಾಡುವ ತವಾಫ್ ಅಸಿಂಧುವಾಗಿದೆ.

**3**. ಎಲ್ಲ ತವಾಫ್‌ಗಳಲ್ಲೂ ರಮ್ಲ್ (ಬಿರುಸಾಗಿ ನಡೆಯುವುದು) ಮಾಡುವುದು. ತವಾಫ್

ಅಲ್‌ಕುದೂಮ್ (ಆಗಮನದ ತವಾಫ್)ನ ಮೊದಲ ಮೂರು ತವಾಫ್‌ಗಳಲ್ಲಿ ಮಾತ್ರ ರಮ್ಲ್ ಮಾಡಬೇಕಾಗಿದೆ.

**4**. ಹಜರುಲ್ ಅಸ್ವದನ್ನು ಚುಂಬಿಸುವುದಕ್ಕಾಗಿ ಮುಗಿ ಬೀಳುವುದು. ಕೆಲವೊಮ್ಮೆ ಇದಕ್ಕಾಗಿ ಇತರರನ್ನು ಥಳಿಸು ವುದು ಅಥವಾ ದೂಷಿಸುವುದು. ಮುಸ್ಲಿಮರಿಗೆ ತೊಂದರೆ ನೀಡುವ ಇಂತಹ ಕಾರ್ಯಗಳು ಸಮ್ಮತಾರ್ಹವಲ್ಲ. ನ್ಯಾಯವಾದ ಕಾರಣವಿಲ್ಲದೆ ಮುಸ್ಲಿಮ್ ಸಹೋದರನನ್ನು ಥಳಿಸುವುದು ಅಥವಾ ದೂಷಿಸುವುದು ಸಮ್ಮತಾರ್ಹವಲ್ಲ.

ಹಜರುಲ್ ಅಸ್ವದನ್ನು ಚುಂಬಿಸದಿದ್ದರೂ ತವಾಫ್ ಸಿಂಧುವಾಗುತ್ತದೆ ಎಂದು ನಾವು ಅರಿತಿರಬೇಕಾಗಿದೆ. ಹಜರುಲ್ ಅಸ್ವದನ್ನು ಚುಂಬಿಸಲು ಸಾಧ್ಯವಾಗದಿದ್ದರೆ ಅದರೆಡೆಗೆ ಬೆರಳು ತೋರಿಸಿ 'ಅಲ್ಲಾಹು ಅಕ್ಬರ್' ಎಂದು ಹೇಳಿದರೆ ಸಾಕು. ತವಾಫ್ ಮಾಡುತ್ತಿರುವ ಸಂದರ್ಭ ಹಜರುಲ್ ಅಸ್ವದ್‌ನ ಬಳಿ ಬರುವಾಗ ಹೀಗೆ ಮಾಡಿರಿ. ಹಜರುಲ್ ಅಸ್ವದ್‌ನಿಂದ ಬಹುದೂರದಲ್ಲಿದ್ದರೂ ಕೂಡ.

**5**. ಬರಕತ್ ಪಡೆಯುವ ಸಲುವಾಗಿ ಹಜರುಲ್ ಅಸ್ವದನ್ನು ಚುಂಬಿಸುವುದು ಬಿದ್‌ಅತ್ ಆಗಿದೆ. ಅದಕ್ಕೆ ಇಸ್ಲಾಮೀ ಶರೀಅತ್ತಿನಲ್ಲಿ ಯಾವ ಆಧಾರವೂ ಇಲ್ಲ. ಅದನ್ನು ಸ್ಪರ್ಶಿಸುವುದು ಅಥವಾ ಚುಂಬಿಸುವುದು

ಸುನ್ನತ್ತಾಗಿರುವುದು ಕೇವಲ ಅಲ್ಲಾಹನ ಅನುಸರಣೆ ಮಾಡುವುದಕ್ಕೆ ಮಾತ್ರವಾಗಿದೆ.

**6**. ಕಅ್‌ಬಾದ ನಾಲ್ಕು ಮೂಲೆಗಳನ್ನು ಅಥವಾ ಅದರ ಗೋಡೆಯನ್ನು ಸ್ಪರ್ಶಿಸುವುದು ಅಥವಾ ಕೈ ಮುಖಗಳನ್ನು ಅದಕ್ಕೆ ಸವರುವುದು. ಪ್ರವಾದಿ(ﷺ)ರವರು ಹಜರುಲ್ ಅಸ್ವದ್ ಮತ್ತು ಯಮಾನೀ ಮೂಲೆಯ ಹೊರತು ಕಅ್‌ಬಾದ ಯಾವ ಭಾಗವನ್ನು ಸ್ಪರ್ಶಿಸಿರಲಿಲ್ಲ.

**7.** ಪ್ರತಿಯೊಂದು ತವಾಫ್‌ನಲ್ಲೂ ನಿರ್ದಿಷ್ಟ ಪ್ರಾರ್ಥನೆಗಳನ್ನು ಹೇಳುವುದು. ಹಜರುಲ್ ಅಸ್ವದನ್ನು ತಲುಪುವಾಗ 'ಅಲ್ಲಾಹು ಅಕ್ಬರ್' ಎಂದು ಹೇಳುವುದು ಮತ್ತು ಯಮಾನೀ ಮೂಲೆ ಮತ್ತು ಹಜರುಲ್ ಅಸ್ವದ್‌ನ ಮಧ್ಯೆ ಈ ಕೆಳಗಿನ ಪ್ರಾರ್ಥನೆಯನ್ನು ಪ್ರಾರ್ಥಿಸುವುದರ ಹೊರತು ಪ್ರವಾದಿ(ﷺ)ರವರು ಯಾವುದೇ ನಿರ್ದಿಷ್ಟ ಪ್ರಾರ್ಥನೆಗಳನ್ನು ಪ್ರಾರ್ಥಿಸಿರಲಿಲ್ಲ.

﴿ رَبَّنَآ ءَاتِنَا فِي ٱلدُّنْيَا حَسَنَةً وَفِي ٱلْأَخِرَةِ حَسَنَةً وَقِنَا عَذَابَ ٱلنَّارِ ﴿٢٠١﴾ ﴾

**"ರಬ್ಬನಾ ಆತಿನಾ ಫಿದ್ದುನ್ಯಾ ಹಸನತನ್ ವಫಿಲ್**

**ಆಖಿರತಿ ಹಸನತನ್ ವಕಿನಾ ಅದಾಬನ್ನಾರ್."**

(ನಮ್ಮ ಪ್ರಭೂ! ನಮಗೆ ಇಹಲೋಕದಲ್ಲಿ ಒಳಿತನ್ನು ನೀಡು ಮತ್ತು ಪರಲೋಕದಲ್ಲೂ ಒಳಿತನ್ನು ನೀಡು ಮತ್ತು ನಮ್ಮನ್ನು ನರಕ ಶಿಕ್ಷೆಯಿಂದ ಪಾರುಮಾಡು)

**8**. ಇತರರ ಧ್ವನಿಗಿಂತಲೂ ಜೋರಾಗಿ ಧ್ವನಿಯೆತ್ತುವುದು. ಕೆಲವರು ತವಾಫ್ ಮಾಡುವಾಗ ಅಥವಾ ತವಾಫ್‌ನಲ್ಲಿ ಇತರರನ್ನು ಮುನ್ನಡೆಸುವಾಗ ಹೀಗೆ ಮಾಡುತ್ತಾರೆ. ಇದು ಆರಾಧಕರಲ್ಲಿ ಗೊಂದಲವನ್ನುಂಟು ಮಾಡುತ್ತದೆ.

**9**. ಮಕಾಮ್ ಇಬ್ರಾಹೀಮ್ ಬಳಿ ನಮಾಝ್ ಮಾಡಲು ಮುಗಿಬೀಳುವುದು. ಇದು ಇತರ ಆರಾಧಕರಿಗೆ ತೊಂದರೆ ನೀಡುವುದು ಮಾತ್ರವಲ್ಲದೆ ಸುನ್ನತ್‌ಗೆ ವಿರುದ್ಧವೂ ಆಗಿದೆ. ತವಾಫ್ ಮುಗಿದ ಬಳಿಕ ತವಾಫ್‌ನ ನಮಾಝನ್ನು ಪವಿತ್ರ ಮಸೀದಿಯ ಯಾವುದೇ ಭಾಗದಲ್ಲಿ ನಿರ್ವಹಿಸಿದರೂ ಸಾಕಾಗುತ್ತದೆ.

**ಮೂರು: ಸಅ್‌ಯ್‌ಗೆ ಸಂಬಂಧಿಸಿದ ಪ್ರಮಾದಗಳು:**

**1**. ಕೆಲವು ಯಾತ್ರಾರ್ಥಿಗಳು ಸಫಾ ಮತ್ತು ಮರ್ವಾ ಪರ್ವತಗಳನ್ನು ಹತ್ತುವಾಗ, ನಮಾಝ್‌ನಲ್ಲಿ ತಕ್ಬೀರ್ ಹೇಳುವಾಗ ಕೈಯೆತ್ತುವಂತೆ ಅಂಗೈಯನ್ನು ಕಅ್‌ಬಾಗೆ ತೋರಿಸಿ 'ಅಲ್ಲಾಹು ಅಕ್ಬರ್' ಎನ್ನುತ್ತಾ ಕೈ ಎತ್ತುತ್ತಾರೆ.

ದುಆ ಮಾಡುವಾಗ ಕೈಯೆತ್ತುವಂತೆ ಕೈಯೆತ್ತುವುದಾಗಿದೆ ಸುನ್ನತ್.

**2.** ಸಫಾ ಮತ್ತು ಮರ್ವಾದ ಮಧ್ಯೆಯಿರುವ ಎಲ್ಲ ಪ್ರದಕ್ಷಿಣೆಗಳಲ್ಲೂ ಬಿರುಸಾಗಿ ನಡೆಯುವುದು. ಎರಡು ಹಸಿರು ಕಂಬಗಳ ಮಧ್ಯೆ ಮಾತ್ರ ಬಿರುಸಾಗಿ ನಡೆಯುವುದು ಸುನ್ನತ್ತಾಗಿದೆ. ಇತರೆಡೆಗಳಲ್ಲಿ ಸಾಧಾರಣ ಸ್ಥಿತಿಯಲ್ಲಿ ನಡೆಯಬೇಕಾಗಿದೆ.

**ನಾಲ್ಕು: ಅರಫಾತ್‌ಗೆ ಸಂಬಂಧಿಸಿದ ಪ್ರಮಾದಗಳು:**

**1.** ಕೆಲವು ಯಾತ್ರಾರ್ಥಿಗಳು ಅರಫಾತ್‌ನ ಸೀಮೆಗಳ ಹೊರಗೆ ನಿಲ್ಲುತ್ತಾರೆ ಮತ್ತು ಸೂರ್ಯಾಸ್ತದ ತನಕ ಅಲ್ಲೇ ಉಳಿಯುತ್ತಾರೆ. ತರುವಾಯ ಅವರು ಅರಫಾತ್‌ನಲ್ಲಿ ನಿಲ್ಲದ ಸ್ಥಿತಿಯಲ್ಲಿ ಮುಝ್ದಲಿಫಾದತ್ತ ಚಲಿಸುತ್ತಾರೆ. ಇದೊಂದು ಗಂಭೀರ ಪ್ರಮಾದವಾಗಿದೆ. ಅರಫಾತ್‌ನಲ್ಲಿ ನಿಲ್ಲುವುದು ಹಜ್ಜ್‌ನ ಅವಿಭಾಜ್ಯ ಅಂಗವಾಗಿರುವುದರಿಂದ ಇದು ಅವರ ಹಜ್ಜನ್ನು ನಿರರ್ಥಕಗೊಳಿಸುತ್ತದೆ. ಅರಫಾತ್‌ನಲ್ಲಿ ನಿಲ್ಲುವಾಗ ಅದರ ಸೀಮೆಗಳ ಒಳಗೆ ನಿಲ್ಲಬೇಕೇ ಹೊರತು ಹೊರಗಲ್ಲ. ಹಾಗೆ ನಿಲ್ಲಲು ಕಷ್ಟವಾಗುವುದಾದರೆ ಸೂರ್ಯಾಸ್ತಕ್ಕೆ ಮುಂಚೆ ಅರಫಾತ್‌ನ ಸೀಮೆಯೊಳಗೆ ಬಂದು ಸೂರ್ಯಾಸ್ತದ ತನಕ ಅಲ್ಲೇ ನಿಲ್ಲಬೇಕಾಗಿದೆ.

ಬಲಿದಿನದ ರಾತ್ರಿಯಂದು ನಿಗದಿತವಾಗಿ ಅರಫಾತ್‌ನಲ್ಲಿ ನಿಲ್ಲುವುದು ಕೂಡ ಅಂಗೀಕಾರಾರ್ಹವಾಗಿದೆ.

**2**. ಸೂರ್ಯಾಸ್ತವಾಗುವ ಮೊದಲು ಅರಫಾತ್ ನಿಂದ ಕದಲುವುದು ಸಮ್ಮತಾರ್ಹವಲ್ಲ. ಯಾಕೆಂದರೆ ಸೂರ್ಯ ಸಂಪೂರ್ಣವಾಗಿ ಅಸ್ತಮಿಸುವ ತನಕ ಪ್ರವಾದಿ (ﷺ)ರವರು ಅರಫಾತ್‌ನಲ್ಲೇ ನಿಂತಿದ್ದರು.

**3**. ಅರಫಾತ್ ಪರ್ವತವನ್ನು ಹತ್ತುವುದಕ್ಕಾಗಿ ಮುಗಿಬೀಳುವುದು ಸಮ್ಮತಾರ್ಹವಲ್ಲ. ಯಾಕೆಂದರೆ ಅದು ಇತರರಿಗೆ ಹಿಂಸೆ ಮತ್ತು ನೋವನ್ನುಂಟುಮಾಡುತ್ತದೆ. ಅರಫಾತ್‌ನ ಸಂಪೂರ್ಣ ಮೈದಾನ ನಿಲ್ಲುವುದಕ್ಕಾಗಿಯೇ ಇರುವುದಾಗಿದೆ. ಅರಫಾತ್ ಪರ್ವತವನ್ನು ಹತ್ತುವುದು ಅಥವಾ ಅಲ್ಲಿ ನಮಾಝ್ ಮಾಡುವುದು ಶರೀಅತ್ತಿನಲ್ಲಿ ನಿರ್ದೇಶಿಸಲಾಗಿಲ್ಲ.

**4**. ಅರಫಾತ್ ಪರ್ವತಕ್ಕೆ ಮುಖಮಾಡಿ ದುಆ ಮಾಡುವುದು ಸರಿಯಲ್ಲ. ದುಆ ಮಾಡುವಾಗ ಕಿಬ್ಲಕ್ಕೆ ಮುಖಮಾಡುವುದು ಸುನ್ನತ್ತಾಗಿದೆ.

**5**. ಅರಫಾತ್‌ನಲ್ಲಿ ತಂಗುವ ಸಂದರ್ಭ ಕೆಲವರು ಮಣ್ಣು ಅಥವಾ ಕಲ್ಲುಗಳನ್ನು ರಾಶಿ ಮಾಡುತ್ತಾರೆ. ಇದಕ್ಕೆ ಅಲ್ಲಾಹನ ಶರೀಅತ್ತಿನಲ್ಲಿ ಯಾವ ಪುರಾವೆಯೂ ಇಲ್ಲ.

**ಐದು: ಮುಝ್ದಲಿಫಾಗೆ ಸಂಬಂಧಿಸಿದ ಪ್ರಮಾದಗಳು:**

ಕೆಲವು ಯಾತ್ರಾರ್ಥಿಗಳು ಮುಝ್ದಲಿಫಾಗೆ ಆಗಮಿಸಿದ ತಕ್ಷಣ ಮಗ್ರಿಬ್ ಮತ್ತು ಇಶಾ ನಮಾಝ್ ಮಾಡುವುದಕ್ಕೆ ಮುಂಚೆಯೇ ಜಮರಾತ್‌ಗೆ ಎಸೆಯುವುದಕ್ಕಾಗಿ ಕಲ್ಲುಗಳನ್ನು ಹೆಕ್ಕುವುದರಲ್ಲಿ ತಲ್ಲೀನರಾಗುತ್ತಾರೆ. ಇದು ಸರಿಯಲ್ಲ. ಅದೇ ರೀತಿ ಕಲ್ಲುಗಳನ್ನು ಮುಝ್ದಲಿಫಾದಿಂದಲೇ ಹೆಕ್ಕಬೇಕೆಂದು ಭಾವಿಸುವುದು ಕೂಡ ಸರಿಯಲ್ಲ.

ಸರಿಯಾದ ರೀತಿ ಏನೆಂದರೆ ಕಲ್ಲುಗಳನ್ನು ಹರಮ್‌ನ ವ್ಯಾಪ್ತಿಯಲ್ಲಿ ಬರುವ ಯಾವುದೇ ಪ್ರದೇಶದಿಂದಲೂ ಹೆಕ್ಕಬಹುದು. ಜಮರತುಲ್ ಅಕಬಾಕ್ಕೆ ಎಸೆಯಲು ಕಲ್ಲುಗಳನ್ನು ತರಲು ಪ್ರವಾದಿ(ﷺ)ರವರು ಹೇಳಿದಾಗ ಅದನ್ನು ಮುಝ್ದಲಿಫಾದಿಂದಲೇ ಹೆಕ್ಕಿ ತರಬೇಕೆಂದು ಹೇಳಲಿಲ್ಲ. ಮುಝ್ದಲಿಫಾ ತೊರೆದು ಮಿನಾ ಪ್ರವೇಶಿಸಿದ ಸಂದರ್ಭ ಬೆಳಗ್ಗಿನ ವೇಳೆಯಲ್ಲಿ ಅವುಗಳನ್ನು ಅವರಿಗೋಸ್ಕರ ಹೆಕ್ಕಿ ತರಲಾಯಿತು. ಉಳಿದ ಕಲ್ಲುಗಳನ್ನೂ ಕೂಡ ಅವರಿಗೋಸ್ಕರ ಮಿನಾದಿಂದಲೇ ಹೆಕ್ಕಿ ತರಲಾಯಿತು.

ಕೆಲವು ಯಾತ್ರಾರ್ಥಿಗಳು ಕಲ್ಲುಗಳನ್ನು ತೊಳೆಯುತ್ತಾರೆ. ಆದರೆ ಇದನ್ನು ಶರೀಅತ್ತಿನಲ್ಲಿ ನಿರ್ದೇಶಿಸಲಾಗಿಲ್ಲ.

**ಆರು: ಕಲ್ಲೆಸೆಯುವುದಕ್ಕೆ ಸಂಬಂಧಿಸಿದ ಪ್ರಮಾದಗಳು:**

**1**. ಜಮರಾತ್‌ಗಳಿಗೆ ಕಲ್ಲೆಸೆಯುವಾಗ ಕೆಲವು ಯಾತ್ರಾರ್ಥಿಗಳು ತಾವು ಸಾಕ್ಷಾತ್ ಶೈತಾನನಿಗೇ ಕಲ್ಲೆಸೆಯುತ್ತಿದ್ದೇವೆಂದು ಭಾವಿಸುತ್ತಾರೆ. ಆದ್ದರಿಂದ ಅವರು ಶಾಪ ಮತ್ತು ಬೈಗುಳಗಳೊಂದಿಗೆ ಆವೇಶದೊಂದಿಗೆ ಕಲ್ಲೆಸೆಯುತ್ತಾರೆ. ಇಲ್ಲ! ಕಲ್ಲೆಸೆಯುವುದು ಕೇವಲ ಅಲ್ಲಾಹನ ಸ್ಮರಣೆಗೋಸ್ಕರ ಮಾತ್ರ ನಿರ್ದೇಶಿಸಲಾಗಿದೆ.

**2**. ಕೆಲವರು ದೊಡ್ಡ ದೊಡ್ಡ ಕಲ್ಲುಗಳನ್ನು, ಚಪ್ಪಲಿಗಳನ್ನು ಮತ್ತು ಮರದ ಕೊರಡುಗಳನ್ನು ಎಸೆಯುತ್ತಾರೆ. ಇದು ಅಲ್ಲಾಹನ ಪ್ರವಾದಿ(ﷺ)ರವರು ವಿರೋಧಿಸಿರುವಂತೆ ಧರ್ಮದಲ್ಲಿ ಮಿತಿಮೀರುವುದಾಗಿದೆ. ಹೀಗೆ ಎಸೆದರೆ ಅದು ಕಲ್ಲೆಸೆಯುವುದಕ್ಕೆ ಪರ್ಯಾಪ್ತವಾಗಲಾರದು.

**3**. ಕಲ್ಲೆಸೆಯುವುದಕ್ಕಾಗಿ ಮುಗಿಬೀಳುವುದು ಮತ್ತು ಜನರನ್ನು ತಳ್ಳುವುದು ಸಮ್ಮತಾರ್ಹವಲ್ಲ. ಇತರರಿಗೆ ಹಾನಿ ಮಾಡುವುದನ್ನು ಸಾಧ್ಯವಾದಷ್ಟು ವರ್ಜಿಸಿ ಗೌರವಾರ್ಹ ವಾದ ರೀತಿಯಲ್ಲಿ ಕಲ್ಲೆಸೆಯುವುದನ್ನು ನಿರ್ದೇಶಿಸಲಾಗಿದೆ.

**4**. ಎಲ್ಲ ಕಲ್ಲುಗಳನ್ನೂ ಒಮ್ಮೆಲೇ ಎಸೆಯುವುದು ತಪ್ಪು. ಹೀಗೆ ಎಸೆದರೆ ಅದು ಒಂದೇ ಬಾರಿ ಎಸೆದಂತಾ ಗುವುದೆಂದು ವಿದ್ವಾಂಸರು ಎಚ್ಚರಿಸಿದ್ದಾರೆ. ಶರೀಅತ್ ನಿರ್ದೇಶಿಸಿದ ಪ್ರಕಾರ ಕಲ್ಲುಗಳನ್ನು ಪ್ರತಿಯೊಂದು

ಎಸೆತದೊಂದಿಗೆ ‘ಅಲ್ಲಾಹು ಅಕ್ಬರ್’ ಎನ್ನುತ್ತಾ ಒಂದೊಂದಾಗಿ ಎಸೆಯಬೇಕಾಗಿದೆ.

**5**. ತನಗೆ ಕಲ್ಲೆಸೆಯಲು ಸಾಧ್ಯವಾಗಿದ್ದು ಕೂಡ ಜನಸಂದಣಿ ಅಥವಾ ಕಷ್ಟವನ್ನು ಭಯಪಟ್ಟು ಕಲ್ಲೆಸೆಯಲು ಬೇರೆಯವರನ್ನು ನಿಯೋಗಿಸುವುದು ತಪ್ಪು. ರೋಗಿಗಳಿಗೆ ಮತ್ತು ಬಲಹೀನರಿಗೆ ಮಾತ್ರ ಕಲ್ಲೆಸೆಯಲು ಇತರರನ್ನು ನಿಯೋಗಿಸುವುದು ಸಮ್ಮತಾರ್ಹವಾಗಿದೆ.

**ಏಳು: ವಿದಾಯದ ತವಾಫ್‌ಗೆ ಸಂಬಂಧಿಸಿದ ಪ್ರಮಾದಗಳು:**

**1**. ನಿರ್ಗಮನ ದಿನದಂದು ಕೆಲವು ಯಾತ್ರಾರ್ಥಿಗಳು ಜಮರಾತ್‌ಗಳಿಗೆ ಕಲ್ಲೆಸೆಯುವುದಕ್ಕೆ ಮುಂಚೆಯೇ ಮಕ್ಕಾಕ್ಕೆ ಬಂದು ವಿದಾಯದ ತವಾಫ್ ಮಾಡಿ ನಂತರ ಮಿನಾದತ್ತ ಚಲಿಸಿ ಕಲ್ಲೆಸೆದು ಅಲ್ಲಿಂದಲೇ ತಮ್ಮ ಊರುಗಳಿಗೆ ನಿರ್ಗಮಿಸುತ್ತಾರೆ. ಇದರಿಂದಾಗಿ ಅವರ ಕೊನೆಯ ಕರ್ಮ ತವಾಫ್ ಆಗಿರುವುದಕ್ಕೆ ಬದಲು ಕಲ್ಲೆಸೆಯುವುದಾಗಿರುತ್ತದೆ. ಇದೊಂದು ಸ್ಪಷ್ಟ ಪ್ರಮಾದವಾಗಿದೆ. ಯಾಕೆಂದರೆ ಪ್ರವಾದಿ(ﷺ)ರವರು ಹೇಳಿದ್ದಾರೆ: **“ತನ್ನ ಕೊನೆಯ ಸಂದರ್ಶನ ಕಅ್‌ಬಾ ಆಗಿರುವ ಹೊರತು ಯಾರೂ ನಿರ್ಗಮಿಸದಿರಲಿ.”**

ಆದ್ದರಿಂದ ಓರ್ವನು ತನ್ನ ಹಜ್ಜ್ ಕರ್ಮಗಳೆಲ್ಲ ವನ್ನೂ ನಿರ್ವಹಿಸಿ ಕೊನೆಯದಾಗಿ ವಿದಾಯದ ತವಾಫ್ ನಿರ್ವಹಿಸಬೇಕಾಗಿದೆ. ಇದಾದ ಬಳಿಕ ಅವನು ಮಕ್ಕಾದಲ್ಲಿ ಉಳಿಯಕೂಡದು. ತನ್ನ ಯಾತ್ರೆಗಾಗಿ ಸಜ್ಜುಗೊಳಿಸುವ ಸಮಯದ ಹೊರತು.

**2**. ವಿದಾಯದ ತವಾಫ್ ಮಾಡಿದ ಬಳಿಕ ಕೆಲವರು ಕಅ್‌ಬಾಗೆ ಮುಖಮಾಡಿ ಹಿಮ್ಮುಖವಾಗಿ ಚಲಿಸಿ ಹೊರಬರುತ್ತಾರೆ. ಇದು ಕಅ್‌ಬಾಗೆ ನೀಡುವ ಗೌರವವೆಂದು ಅವರು ಭಾವಿಸುತ್ತಾರೆ. ವಾಸ್ತವಿಕವಾಗಿ ಇದೊಂದು ಬಿದ್‌ಅತ್ ಆಗಿದೆ. ಧರ್ಮದಲ್ಲಿ ಇದಕ್ಕೆ ಯಾವ ಆಧಾರವೂ ಇಲ್ಲ.

**3**. ವಿದಾಯದ ತವಾಫ್ ಮಾಡಿದ ಬಳಿಕ ಕೆಲವರು ಪವಿತ್ರ ಮಸೀದಿಯ ಹೊಸ್ತಿಲಲ್ಲಿ ನಿಂತು ದುಆ ಮಾಡು ತ್ತಾರೆ. ಇದು ಕೂಡ ಇಸ್ಲಾಮೀ ಶರೀಅತ್ತಿನಲ್ಲಿಲ್ಲದ ಒಂದು ಬಿದ್‌ಅತ್ ಆಗಿದೆ.

**ಎಂಟು: ಪ್ರವಾದಿ(ﷺ)ರವರ ಮಸೀದಿಯನ್ನು ಸಂದರ್ಶಿಸುವುದಕ್ಕೆ ಸಂಬಂಧಿಸಿದ ಪ್ರಮಾದಗಳು:**

**1**. ಪ್ರವಾದಿ(ﷺ)ರವರ ಗೋರಿಯನ್ನು ಸಂದರ್ಶಿ ಸುವಾಗ ಬರಕತ್ ಪಡೆಯುವುದಕ್ಕಾಗಿ ಆವರಣ ಗೋಡೆಗೆ

ಅಥವಾ ಕಬ್ಬಿಣದ ಸರಳುಗಳಿಗೆ ಕೈಗಳನ್ನು ಉಜ್ಜುವುದು, ಅಥವಾ ನೂಲು ಕಟ್ಟುವುದು ಅಥವಾ ಇಂತಹ ಇನ್ನಿತರ ಕಾರ್ಯಗಳನ್ನು ಮಾಡುವುದು. ಇವೆಲ್ಲವೂ ಬಿದ್‌ಅತ್‌ಗಳಾಗಿವೆ. ಬರಕತ್ ದೊರೆಯುವುದು ಅಲ್ಲಾಹು ಮತ್ತು ಪ್ರವಾದಿ(ﷺ)ರವರು ನಿರ್ದೇಶಿಸಿದ ಪ್ರಕಾರ ಅವರನ್ನು ಅನುಸರಿಸುವ ಮೂಲಕವಾಗಿದೆಯೇ ಹೊರತು ಬಿದ್‌ಅತ್‌ಗಳನ್ನು ಮಾಡುವುದರಿಂದಲ್ಲ.

**2**. ಉಹುದ್ ಪರ್ವತದ ಗುಹೆಗಳಿಗೆ ತೆರಳುವುದು, ಅಥವಾ ಮಕ್ಕಾದ ಬಳಿಯಲ್ಲಿರುವ ಹಿರಾ ಅಥವಾ ಸೌರ್ ಗುಹೆಗೆ ತೆರಳುವುದು ಮತ್ತು ಅಲ್ಲಿ ಬಟ್ಟೆ ತುಂಡುಗಳನ್ನು ತೂಗಿಸುವುದು ಅಥವಾ ಪ್ರಾರ್ಥಿಸುವುದು. ಇವಾವುದೂ ಅಲ್ಲಾಹನ ಶರೀಅತ್ತಿನಲ್ಲಿ ನಿರ್ದೇಶಿಸಲಾಗಿಲ್ಲ. ಇವು ವೃಥಾ ಕಷ್ಟ ಅನುಭವಿಸುವುದಾಗಿದೆ ಮತ್ತು ಧರ್ಮದಲ್ಲಿ ಯಾವ ಆಧಾರವೂ ಇಲ್ಲದ ನೂತನಾಚಾರವನ್ನು ಸ್ಥಾಪಿಸುವುದಾಗಿದೆ.

**3**. ಹಾಗೆಯೇ ಪ್ರವಾದಿ(ﷺ)ರವರೊಂದಿಗೆ ಸಂಬಂಧ ಹೊಂದಿದೆ ಎಂದು ಹೇಳಲಾಗುವ ಸ್ಥಳಗಳನ್ನು ಸಂದರ್ಶಿ ಸುವುದು. ಉದಾಹರಣೆಗೆ ಪ್ರವಾದಿ(ﷺ) ರವರು ಪ್ರಥಮ ಬಾರಿ ಮದೀನಕ್ಕೆ ಬಂದಾಗ ಅವರ

ಒಂಟೆಯು ಮಂಡಿಯೂರಿದ ಸ್ಥಳ, ಅಥವಾ ಬಿಅ್ರ್ ಉಸ್ಮಾನ್ ಹಾಗೂ ಈ ಸ್ಥಳಗಳಿಂದ ಬರಕತ್‌ಗಾಗಿ ಮಣ್ಣು ಸಂಗ್ರಹಿಸುವುದು ಬಿದ್‌ಅತ್ ಆಗಿವೆ.

**4**. ಬಕೀಅ್ ಕಬರಸ್ಥಾನವನ್ನು ಅಥವಾ ಉಹುದ್ ಶುಹದಾಗಳ ಗೋರಿಗಳನ್ನು ಸಂದರ್ಶಿಸುವಾಗ ಅವರೊಂದಿಗೆ ಪ್ರಾರ್ಥಿಸುವುದು, ಆ ಸ್ಥಳಗಳ ಬರಕತ್ ಪಡೆಯುವುದಕ್ಕಾಗಿ ಅಥವಾ ಅಲ್ಲಿ ದಫನ ಮಾಡಲಾದವರ ಬರಕತ್ ಪಡೆಯುವುದಕ್ಕಾಗಿ ಅಲ್ಲಿ ನಾಣ್ಯಗಳನ್ನು ಎಸೆಯುವುದು ಭೀಕರ ಪ್ರಮಾದವಾಗಿದೆ. ವಿದ್ವಾಂಸರು ಸೂಚಿಸಿದಂತೆ ಮತ್ತು ಕುರ್‌ಆನ್ ಹಾಗೂ ಸುನ್ನತ್‌ನಲ್ಲಿ ಸ್ಪಷ್ಟವಾಗಿ ಹೇಳಲಾದಂತೆ ಅದು ಶಿರ್ಕ್ ಆಗಿದೆ. ಎಲ್ಲ ಆರಾಧನೆಗಳು ಅಲ್ಲಾಹನಿಗೆ ಮಾತ್ರ ಸಲ್ಲತಕ್ಕದ್ದಾಗಿದೆ. ಆರಾಧನೆಗಳಲ್ಲಿ ಅಲ್ಲಾಹನ ಹೊರತಾದ ಇತರರನ್ನು ಸೇರಿಸುವುದು ಅಂದರೆ ಅಲ್ಲಾಹೇತರರೊಂದಿಗೆ ಪ್ರಾರ್ಥಿಸುವುದು, ಅವರಿಗೆ ಬಲಿ ಅರ್ಪಿಸುವುದು, ಅವರಿಗೆ ಹರಕೆ ಸಲ್ಲಿಸುವುದು ಇತ್ಯಾದಿ ನಿಷಿದ್ಧವಾಗಿದೆ. ಆರಾಧನೆಗಳ ಎಲ್ಲ ವಿಧಗಳನ್ನೂ ಅಲ್ಲಾಹನಿಗೆ ಮಾತ್ರ ಸಲ್ಲಿಸಬೇಕಾಗಿದೆ.

ಅಲ್ಲಾಹು ಹೇಳಿದ್ದಾನೆ:

﴿ وَمَآ أُمِرُوٓاْ إِلَّا لِيَعۡبُدُواْ ٱللَّهَ مُخۡلِصِينَ لَهُ ٱلدِّينَ ﴾

**“ಧರ್ಮವನ್ನು ಅಲ್ಲಾಹನಿಗೆ ನಿಷ್ಕಳಂಕವಾಗಿಸಿ ಅವನನ್ನು ಮಾತ್ರ ಆರಾಧಿಸಬೇಕೆಂಬುದರ ಹೊರತು ಬೇರೇನನ್ನೂ ಅವರೊಂದಿಗೆ ಆದೇಶಿಸಲಾಗಿಲ್ಲ.”** (ಕುರ್‌ಆನ್ 98/4)

ಅಲ್ಲಾಹು ಹೇಳಿದ್ದಾನೆ:

﴿ وَأَنَّ ٱلۡمَسَٰجِدَ لِلَّهِ فَلَا تَدۡعُواْ مَعَ ٱللَّهِ أَحَدٗا ١٨ ﴾

**“ಖಂಡಿತವಾಗಿಯೂ ಮಸೀದಿಗಳು ಅಲ್ಲಾಹನದ್ದಾಗಿವೆ. ಆದ್ದರಿಂದ ಅವನೊಂದಿಗೆ ಇತರ ಯಾರನ್ನೂ ಪ್ರಾರ್ಥಿಸದಿರಿ.”** (ಕುರ್‌ಆನ್ 72/18)

ಮುಸ್ಲಿಮರ ಸ್ಥಿತಿಯನ್ನು ಸುಧಾರಣೆಗೊಳಿಸಲು, ಅವರು ಧರ್ಮವನ್ನು ಕಲಿಯುವಂತೆ ಮಾಡಲು ಮತ್ತು ಅವರನ್ನು ಪ್ರಮಾದಗಳಿಂದ ಮತ್ತು ಪಥಭ್ರಷ್ಟತೆಯಿಂದ ಮುಕ್ತವಾಗಿಸಲು ನಾವು ಅಲ್ಲಾಹನೊಂದಿಗೆ ಬೇಡುತ್ತಿರುವೆವು. ಖಂಡಿತವಾಗಿಯೂ ಅವನು ಎಲ್ಲವನ್ನೂ ಆಲಿಸುವವನೂ ಉತ್ತರಿಸುವವನೂ ಆಗಿರುವನು.

# ಯಾತ್ರಾರ್ಥಿಗಳು ಕಡ್ಡಾಯವಾಗಿ ಅರಿತಿರಬೇಕಾದ ಕಾರ್ಯಗಳು

**1**. ಎಲ್ಲ ವಿಧ ಪಾಪಗಳಿಂದಲೂ ನಿಷ್ಕಳಂಕವಾಗಿ ಪಶ್ಚಾತ್ತಾಪಪಟ್ಟು ಮರಳುವುದು. ಹಜ್ಜ್ ಮತ್ತು ಉಮ್ರಾಕ್ಕಾಗಿ ವ್ಯಯಿಸುವ ಧನ ಧರ್ಮಸಮ್ಮತವಾದ ಮೂಲದಿಂದಾಗಿರುವುದು.

**2**. ಸುಳ್ಳು, ಚಾಡಿ ಮತ್ತು ಪರನಿಂದೆಯಿಂದ ತನ್ನ ನಾಲಗೆಯನ್ನು ರಕ್ಷಿಸುವುದು.

**3**. ಹಜ್ಜ್ ಅಥವಾ ಉಮ್ರಾ ಮಾಡುವ ಉದ್ದೇಶವು ನಿಷ್ಕಳಂಕವಾಗಿ ಕೇವಲ ಅಲ್ಲಾಹನಿಗೆ ಮಾತ್ರವಾಗಿರುವುದು.

**4**. ಹಜ್ಜ್ ಮತ್ತು ಉಮ್ರಾದಲ್ಲಿ ನಿರ್ವಹಿಸಬೇಕಾದ ಕರ್ಮಗಳನ್ನು ಶರೀಅತ್ ನಿರ್ದೇಶಿಸಿದ ರೀತಿಯಲ್ಲಿ ಕಲಿಯುವುದು. ಏನಾದರೂ ಸಂದೇಹವುಂಟಾದರೆ ಅರಿತವರೊಂದಿಗೆ ವಿಚಾರಿಸುವುದು.

**5**. ಯಾತ್ರಾರ್ಥಿ ಮೀಕಾತ್ ತಲುಪಿದರೆ ಮೂರು ರೀತಿಯ ಹಜ್ಜ್‌ಗಳಲ್ಲಿ (ಇಫ್ರಾದ್, ಕಿರಾನ್ ಮತ್ತು

ತಮತ್ತುಅ್) ಯಾವುದಾದರೂ ಒಂದನ್ನು ಆರಿಸಲು ಅವನಿಗೆ ಸ್ವಾತಂತ್ರ್ಯವಿದೆ. ತನ್ನೊಂದಿಗೆ ಬಲಿ ಮೃಗವನ್ನು ತರದಿರುವ ವ್ಯಕ್ತಿಗೆ ತಮತ್ತುಅ್ ಹೆಚ್ಚು ಯೋಗ್ಯವಾಗಿದೆ. ಬಲಿ ಮೃಗವನ್ನು ತಂದವನಿಗೂ ಇದುವೇ ಯೋಗ್ಯವಾಗಿದೆ.

**6**. ರೋಗದಿಂದ ಅಥವಾ ಅಸುರಕ್ಷಿತತೆಯಿಂದ ಹಜ್ಜನ್ನು ಪೂರ್ತೀಕರಿಸಲು ಸಾಧ್ಯವಾಗದೆಂದು ಭಯಪಡುವ ವ್ಯಕ್ತಿ ಇಹ್ರಾಮ್ ಪ್ರವೇಶಿಸುವಾಗ ಈ ನಿಬಂಧನೆ ಇಡಬೇಕಾಗಿದೆ '(ಹಜ್ಜ್ ಕರ್ಮ ನಿರ್ವಹಿಸುವುದರಿಂದ) ನನ್ನನ್ನು ತಡೆಗಟ್ಟಲಾದರೆ ನಾನು ಪೂರ್ವ ಸ್ಥಿತಿಗೆ ಮರಳುವೆನು'.

**7**. ಮಕ್ಕಳ ಹಜ್ಜ್ ಸಿಂಧುವಾಗಿದೆ. ಆದರೆ ಅವರ ಮೇಲೆ ಕಡ್ಡಾಯವಾಗಿರುವ ಹಜ್ಜ್‌ನಿಂದ ಇದು ಅವರನ್ನು ಹೊರತುಪಡಿಸಲಾರದು.

**8**. ಇಹ್ರಾಮಿನ ಸಂದರ್ಭದಲ್ಲಿ ಸ್ನಾನ, ತಲೆ ತೊಳೆಯುವುದು, ತಲೆ ತುರಿಸುವುದು ಇತ್ಯಾದಿ ಅಗತ್ಯ ಬಿದ್ದರೆ ಮಾಡಬಹುದು.

**9**. ಮಹ್ರಮ್ ಅಲ್ಲದ ವ್ಯಕ್ತಿಗಳು ತನ್ನನ್ನು ನೋಡುತ್ತಿದ್ದಾರೆಂದು ಭಯಪಟ್ಟರೆ ಸ್ತ್ರೀ ತನ್ನ ಮುಖವನ್ನು ಮುಚ್ಚಿಕೊಳ್ಳಬಹುದು.

**10**. ಪರ್ದಾವನ್ನು ತಮ್ಮ ಮುಖದಿಂದ ದೂರವಿಡು

ವುದಕ್ಕಾಗಿ ಕೆಲವು ಮಹಿಳೆಯರು ಪರ್ದಾದ ಕೆಳಗೆ ಹಣೆಪಟ್ಟಿಯನ್ನು ಕಟ್ಟುತ್ತಾರೆ. ಇದಕ್ಕೆ ಶರೀಅತ್ತಿನಲ್ಲಿ ಯಾವ ಆಧಾರವೂ ಇಲ್ಲ.

**11**. ಇಹ್ರಾಮ್ ವಸ್ತ್ರಗಳನ್ನು ತೊಳೆಯುವುದು, ನಂತರ ಅದನ್ನೇ ಪುನಃ ಧರಿಸುವುದು, ಅಥವಾ ಇಹ್ರಾಮ್ ವಸ್ತ್ರಗಳನ್ನು ಬದಲಾಯಿಸುವುದು ಅನುಮತಿಸಲಾಗಿದೆ.

**12**. ಇಹ್ರಾಮಿನ ಸ್ಥಿತಿಯಲ್ಲಿರುವಾಗ ಮರೆವಿನಿಂದಾಗಿ ಅಥವಾ ಅಜ್ಞಾನದಿಂದಾಗಿ ಹೊಲಿದ ವಸ್ತ್ರ ಧರಿಸಿದರೆ, ತಲೆಯನ್ನು ಮರೆಮಾಚಿದರೆ, ಅಥವಾ ಸುಗಂಧ ಲೇಪಿಸಿದರೆ ಯಾವುದೇ ಪ್ರಾಯಶ್ಚಿತ್ತ ನೀಡಬೇಕಾಗಿಲ್ಲ.

**13**. ಹಜ್ಜ್ ಅತ್ತಮತ್ತುಅ್ ಅಥವಾ ಉಮ್ರಾ ಮಾಡುವುದಾಗಿದ್ದರೆ ಕಅ್‌ಬಾ ತಲುಪಿದೊಡನೆ ತವಾಫ್ ಮಾಡುವುದಕ್ಕೆ ಮುಂಚಿತವಾಗಿ ತಲ್ಬಿಯತ್ ಹೇಳುವುದನ್ನು ನಿಲ್ಲಿಸಬೇಕಾಗಿದೆ.

**14**. ಆಗಮನದ ತವಾಫ್ (ತವಾಫ್ ಅಲ್ ಕುದೂಮ್)ನಲ್ಲಿ ಹೊರತು ಬಿರುಸಾಗಿ ನಡೆಯುವುದು ಮತ್ತು ಬಲಭುಜವನ್ನು ತೆರೆಯುವುದು ಅನುಮತಿಸಲಾಗಿಲ್ಲ. ಇದು ಪುರುಷರಿಗೆ ಮಾತ್ರ ಬಾಧಕವಾಗಿದೆ. ಈ ರೀತಿಯ ನಡೆಯನ್ನು ನಿರ್ದೇಶಿಸಲಾಗಿರುವುದು ಮೊದಲ

ಮೂರು ತವಾಫ್‌ಗಳಲ್ಲಿ ಮಾತ್ರ.

**15**. ತಾನು ಎಷ್ಟು ಸುತ್ತು ತವಾಫ್ ಮಾಡಿದ್ದೇನೆಂದು ಯಾತ್ರಾರ್ಥಿ ಮರೆತರೆ ಕಡಿಮೆ ಸಂಖ್ಯೆಗೆ ಸೀಮಿತಗೊಳಿಸ ಬೇಕಾಗಿದೆ. (ಅಂದರೆ ಮೂರೋ ನಾಲ್ಕೋ ಎಂದು ಸಂಶಯವಾದರೆ ಮೂರೆಂದು ಪರಿಗಣಿಸಬೇಕಾಗಿದೆ).

**16**. ಜನಸಂದಣಿ ಅಪಾರವಾಗಿರುವ ಸಂದರ್ಭ ಮಕಾಮ್ ಇಬ್ರಾಹೀಮ್‌ನ ಹಿಂಭಾಗದಿಂದ ಅಥವಾ ಅದಕ್ಕಿಂತಲೂ ವಿದೂರದಿಂದ ತವಾಫ್ ಮಾಡುವುದರಲ್ಲಿ ತೊಂದರೆಯಿಲ್ಲ. ಯಾಕೆಂದರೆ ಪವಿತ್ರ ಮಸೀದಿ ಪೂರ್ಣ ವಾಗಿಯೂ ತವಾಫ್‌ನ ಸ್ಥಳವಾಗಿದೆ. ಅದು ಮಸೀದಿಯ ಕೆಳ ಅಂತಸ್ತಾದರೂ ಮೇಲಿನ ಅಂತಸ್ತಾದರೂ ಸರಿ.

**17**. ತನ್ನ ಆಭರಣಗಳನ್ನು ಪ್ರದರ್ಶಿಸುವುದು, ಸುಗಂಧ ಲೇಪಿಸುವುದು, ತನ್ನ ಔರತ್ತನ್ನು ಸರಿಯಾಗಿ ಮರೆಮಾಚದಿರುವುದು ಮಹಿಳೆಯರಿಂದ ಸಂಭವಿಸುವ ಕೆಟ್ಟ ಪ್ರವೃತ್ತಿಗಳಾಗಿವೆ.

**18**. ಇಹ್ರಾಮ್ ಪ್ರವೇಶಿಸಿದ ನಂತರ ಋತುಸ್ರಾವ ಉಂಟಾದರೆ ಅಥವಾ ಹೆರಿಗೆಯಾದರೆ ಶುದ್ಧಿಯಾಗುವ ತನಕ ಆ ಸ್ತ್ರೀ ತವಾಫ್ ಮಾಡಕೂಡದು.

**19**. ಪುರುಷರ ಉಡುಪುಗಳನ್ನು ಹೋಲದ, ತನ್ನ

ಅಲಂಕಾರವನ್ನು ಪ್ರದರ್ಶಿಸದ, ಅಥವಾ ಪುರುಷರಿಗೆ ಉದ್ರೇಕವುಂಟು ಮಾಡದ ರೀತಿಯಲ್ಲಿರುವ ಯಾವ ಉಡುಪನ್ನೂ ಮಹಿಳೆ ಧರಿಸಬಹುದು.

**20**. ಹಜ್ಜ್ ಮತ್ತು ಉಮ್ರಾಕ್ಕಿರುವ ನಿಯ್ಯತ್‌ನ ಹೊರತು ಇತರ ನಿಯ್ಯತ್‌ಗಳನ್ನು ಉಚ್ಛರಿಸುವುದು ಬಿದ್‌ಅತ್ ಆಗಿದೆ. ಇದನ್ನು ಕೂಡ ಜೋರಾಗಿ ಉಚ್ಛರಿಸುವುದು ಸರಿಯಲ್ಲ.

**21**. ಓರ್ವ ಮುಸ್ಲಿಮನು ಹಜ್ಜ್ ಅಥವಾ ಉಮ್ರಾ ನಿರ್ವಹಿಸುವ ಉದ್ದೇಶ ಹೊಂದಿದ್ದರೆ ಇಹ್ರಾಮ್ ಪ್ರವೇಶಿಸದೆ ಮೀಕಾತ್ ದಾಟುವುದು ಅವನ ಮೇಲೆ ನಿಷಿದ್ಧವಾಗಿದೆ.

**22**. ಯಾತ್ರಾರ್ಥಿಯು ವಿಮಾನದಲ್ಲಿ ಪ್ರಯಾಣ ಮಾಡುವುದಾದರೆ ಅವನು ದಾರಿ ಮಧ್ಯೆ ಮೀಕಾತ್‌ನ ಸ್ಥಳದ ಮೇಲ್ಭಾಗಕ್ಕೆ ತಲುಪುವಾಗ ಇಹ್ರಾಮ್ ಪ್ರವೇಶಿಸಬೇಕಾಗಿದೆ. ಅದಕ್ಕಾಗಿ ಅವನು ಆ ಸ್ಥಳ ತಲುಪುವ ಮೊದಲೇ ಇಹ್ರಾಮ್‌ನ ತಯಾರಿ ನಡೆಸಬೇಕಾಗಿದೆ. ವಿಮಾನದಲ್ಲಿರುವಾಗ ತಾನು ಮಲಗುವೆನೋ ಅಥವಾ ಮರೆಯುವೆನೋ ಎಂದು ಯಾರಾದರೂ ಭಯಪಟ್ಟರೆ ಮೀಕಾತ್ ತಲುಪುವ ಮೊದಲೇ ಇಹ್ರಾಮ್

ಪ್ರವೇಶಿಸುವುದರಲ್ಲಿ ತೊಂದರೆಯಿಲ್ಲ.

**23**. ಹಜ್ಜ್ ನಿರ್ವಹಿಸಿದ ನಂತರ ತನ್‌ಈಮ್ ಅಥವಾ ಜಿಅ್‌ರಾನಃದಿಂದ ಅನೇಕ ಉಮ್ರಾಗಳನ್ನು ನಿರ್ವಹಿಸುವುದಕ್ಕೆ ಶರೀಅತ್ತಿನಲ್ಲಿ ಯಾವುದೇ ಪುರಾವೆಯಿಲ್ಲ.

**24**. ಹಜ್ಜ್ ಅತ್ತಮತ್ತುಅ್ ನಿರ್ವಹಿಸುವ ವ್ಯಕ್ತಿ ದುಲ್‌ಹಿಜ್ಜಃ 8ರಂದು ಮಕ್ಕಾದ ತನ್ನ ಸ್ಥಳದಿಂದಲೇ ಇಹ್ರಾಮ್ ಪ್ರವೇಶಿಸಬಹುದು. ಅದಕ್ಕಾಗಿ ಅನೇಕ ಜನರು ಮಾಡುವಂತೆ ಮಕ್ಕಾದಲ್ಲಿರುವ ಯಾವುದೇ ನಿಗದಿತ ಸ್ಥಳಕ್ಕೆ ಉದಾ: ಮಿಝಾಬ್, ಹೋಗಬೇಕಾದ ಅಗತ್ಯವಿಲ್ಲ. ಹಾಗೆಯೇ ಮಕ್ಕಾದಿಂದ ಮಿನಾಕ್ಕೆ ತೆರಳುವಾಗ ಯಾವುದೇ ವಿದಾಯದ ತವಾಫ್ ಮಾಡಬೇಕಾಗಿಲ್ಲ.

**25**. ಅರಫಾತ್‌ನಿಂದ ಮಿನಾಕ್ಕೆ ದುಲ್‌ಹಿಜ್ಜಃ 9ರಂದು ಸೂರ್ಯೋದಯದ ನಂತರ ತೆರಳುವುದು ಹೆಚ್ಚು ಸೂಕ್ತವಾಗಿದೆ.

**26**. ದುಲ್‌ಹಿಜ್ಜಃ 9ರಂದು ಸೂರ್ಯಾಸ್ತಕ್ಕೆ ಮುಂಚಿತವಾಗಿ ಅರಫಾತನ್ನು ತೊರೆಯುವುದು ಸಮ್ಮತಾರ್ಹವಲ್ಲ. ಅರಫಾತ್‌ನಿಂದ ತೆರಳುವಾಗ ಶಾಂತವಾಗಿ ಮತ್ತು ನಿರಾಳವಾಗಿ ತೆರಳಬೇಕಾಗಿದೆ.

**27**. ಮಗ್ರಿಬ್ ಮತ್ತು ಇಶಾ ನಮಾಝ್‌ಗಳನ್ನು

ಮುಝ್ದಲಿಫಾ ಪ್ರವೇಶಿಸಿದ ನಂತರ ನಿರ್ವಹಿಸಬೇಕಾಗಿದೆ. ಅವುಗಳನ್ನು ಒಂದೋ ಮಗ್ರಿಬ್‌ನ ಸಮಯದಲ್ಲಿ ಅಥವಾ ಇಶಾದ ಸಮಯದಲ್ಲಿ ನಿರ್ವಹಿಸಬಹುದು.

**28**. ಜಮರಾತ್‌ಗಳಿಗೆ ಎಸೆಯಬೇಕಾದ ಕಲ್ಲುಗಳನ್ನು ಹರಮ್‌ನ ಯಾವ ಭಾಗದಿಂದಲೂ ಹೆಕ್ಕಬಹುದು. ಅದು ಮುಝ್ದಲಿಫಾದಿಂದಲೇ ಆಗಬೇಕೆಂದೇನಿಲ್ಲ.

**29**. ಕಲ್ಲುಗಳನ್ನು ತೊಳೆಯಬೇಕಾದ ಅಗತ್ಯವಿಲ್ಲ. ಯಾಕೆಂದರೆ ಪ್ರವಾದಿ(ﷺ)ರವರಾಗಲಿ ಸಹಾಬಾ ಕಿರಾಮ್ ಆಗಲಿ ಹಾಗೆ ಮಾಡಿಲ್ಲ.

**30**. ಮಹಿಳೆಯರು, ಮಕ್ಕಳು ಮತ್ತು ಬಲಹೀನರಿಗೆ ರಾತ್ರಿಯ ಕೊನೆಯ ಹಂತದಲ್ಲಿ ಮುಝ್ದಲಿಫಾದಿಂದ ಮಿನಾದತ್ತ ತೆರಳಬಹುದಾಗಿದೆ.

**31**. ಈದ್ ದಿನದಂದು (ದುಲ್‌ಹಿಜ್ಜಃ 10ರಂದು) ಮಿನಾ ಪ್ರವೇಶಿಸಿ ಜಮರತುಲ್ ಅಕಬಾಗೆ ಕಲ್ಲೆಸೆಯುವುದರೊಂದಿಗೆ ಯಾತ್ರಾರ್ಥಿ ತಲ್ಬಿಯತ್ ಉಚ್ಛರಿಸುವುದನ್ನು ನಿಲ್ಲಿಸಬೇಕಾಗಿದೆ.

**32**. ಸ್ಥಂಭಕ್ಕೆ ಕಲ್ಲೆಸೆಯುವಾಗ ಅದು ಸ್ಥಂಭದ ಬುಡಕ್ಕೆ ಬೀಳಬೇಕೆಂದೇನಿಲ್ಲ. ಒಟ್ಟಾರೆ ಸ್ಥಂಭಕ್ಕೆ ಕಲ್ಲೆಸೆದರೆ ಸಾಕು.

**33**. ವಿದ್ವಾಂಸರ ಪ್ರಬಲ ಅಭಿಪ್ರಾಯದ ಪ್ರಕಾರ ಮಿನಾದಲ್ಲಿ ತಂಗುವ ಮೂರು ದಿನಗಳ ಪೈಕಿ ಮೂರನೇ ದಿನದ ಸೂರ್ಯಾಸ್ತದವರೆಗೆ ಬಲಿದಾನವನ್ನು ಮುಂದೂಡುವುದು ಸಮ್ಮತಾರ್ಹವಾಗಿದೆ.

**34**. ಈದ್ ದಿನದಂದು (ದುಲ್ ಹಿಜ್ಜಃ 10ರಂದು) ಮಾಡುವ ತವಾಫ್ ಅಲ್ಇಫಾದಃ ಹಜ್ಜ್ ಕರ್ಮದ ಪ್ರಮುಖ ಭಾಗವಾಗಿದೆ. ಅದನ್ನು ತೊರೆದರೆ ಹಜ್ಜ್ ಪೂರ್ತಿಯಾಗುವುದಿಲ್ಲ. ಮಿನಾದಲ್ಲಿ ತಂಗುವ ಕೊನೆಯ ದಿನದ ಕೊನೆಯ ವೇಳೆಯವರೆಗೆ ಅದನ್ನು ಮುಂದೂಡುವುದು ಸಮ್ಮತಾರ್ಹವಾಗಿದೆ.

**35**. ಹಜ್ಜ್ ಅಲ್‌ಕಿರಾನ್ ರೀತಿಯಲ್ಲಿ ಹಜ್ಜ್ ನಿರ್ವಹಿಸುವವನು ಒಂದೇ ಸಅ್ಯ್ ಮಾಡಬೇಕಾಗಿದೆ. ಹಜ್ಜ್ ಅಲ್ಇಫ್ರಾದ್ ನಿರ್ವಹಿಸುವವನು ಕೂಡ.

**36**. ಬಲಿದಿನದಂದು ಯಾತ್ರಾರ್ಥಿಯು ಆ ದಿನದ ಕರ್ಮಗಳನ್ನು ಈ ರೀತಿ ಕ್ರಮಾನುಗತವಾಗಿ ನಿರ್ವಹಿಸಬೇಕಾಗಿದೆ: ಜಮ್ರತುಲ್ ಅಕಬಾಗೆ ಕಲ್ಲೆಸೆಯುವುದು, ತರುವಾಯ ಬಲಿಮೃಗವನ್ನು ಬಲಿದಾನ ಮಾಡುವುದು, ತರುವಾಯ ಕೂದಲನ್ನು ಬೋಳಿಸುವುದು, ತರುವಾಯ ಸಅ್ಯ್‌ನೊಂದಿಗೆ ಕಅ್ಬಾಗೆ ತವಾಫ್ ಮಾಡುವುದು.

ಇವುಗಳನ್ನು ಕ್ರಮತಪ್ಪಿ ಮಾಡಿದರೆ ಅದರಲ್ಲಿ ತೊಂದರೆಯಿಲ್ಲ.

**37**. ಈ ಕೆಳಗಿನ ಕರ್ಮಗಳನ್ನು ನಿರ್ವಹಿಸಿದ ಬಳಿಕ ಇಹ್ರಾಮ್‌ನಿಂದ ಸಹಜ ಸ್ಥಿತಿಗೆ ಮರಳುವಂತಾಗುತ್ತದೆ: (ಎ) ಜಮ್ರತುಲ್ ಅಕಬಾಗೆ ಕಲ್ಲೆಸೆಯುವುದು, (ಬಿ) ತಲೆ ಯನ್ನು ಬೋಳಿಸುವುದು, (ಸಿ) ತವಾಫ್ ಅಲ್‌ಇಫಾದಃ ನಿರ್ವಹಿಸುವುದು.

**38**. ಮಿನಾದಲ್ಲಿ ತಂಗುವ ಸಮಯವನ್ನು ಕುಗ್ಗಿಸಲು ಯಾರಾದರೂ ಬಯಸಿದರೆ ಅವನು ಸೂರ್ಯಾಸ್ತಕ್ಕೆ ಮುಂಚೆಯೇ ಮಿನಾವನ್ನು ತೊರೆಯಬೇಕಾಗಿದೆ.

**39**. ಮಗುವಿಗೆ ಕಲ್ಲೆಸೆಯಲು ಸಾಧ್ಯವಾಗದಿದ್ದರೆ ಅದರ ಪಾಲಕನು ತನ್ನ ವತಿಯ ಕಲ್ಲೆಸೆದ ನಂತರ ಕಲ್ಲೆಸೆಯಬಹುದಾಗಿದೆ.

**40**. ವೃದ್ಧಾಪ್ಯ, ರೋಗ ಅಥವಾ ಇತರ ಕಾರಣ ಗಳಿಂದಾಗಿ ಯಾರಿಗಾದರೂ ಕಲ್ಲೆಸೆಯಲು ಸಾಧ್ಯವಾಗ ದಿದ್ದರೆ ಅವನ ಪರವಾಗಿ ಕಲ್ಲೆಸೆಯಲು ಬೇರೆಯವರನ್ನು ನೇಮಿಸಬಹುದಾಗಿದೆ.

**41**. ಇತರರ ಪರವಾಗಿ ಕಲ್ಲೆಸೆಯಲು ನೇಮಿಸಲಾದವನು ತನ್ನ ಪರವಾಗಿ ಮೊದಲು ಎಸೆಯ

ಬೇಕಾಗಿದೆ. ತರುವಾಯ ಸ್ಥಳವನ್ನು ತೊರೆಯದೆ ಇತರ ಪರವಾಗಿ ಕಲ್ಲೆಸೆಯಬೇಕಾಗಿದೆ. ಮೂರು ಸ್ಥಂಭಗಳ ಬಳಿಯೂ ಹೀಗೆಯೇ ಮಾಡಬೇಕಾಗಿದೆ.

**42**. ಪವಿತ್ರ ಮಸೀದಿಯ ನಿವಾಸಿಗಳಲ್ಲದವರಿಗೆ ಹದ್ಯ್ ಅಂದರೆ ಒಂದು ಕುರಿಯನ್ನು, ಅಥವಾ ಒಂಟೆಯ ಅಥವಾ ಹಸುವಿನ ಏಳನೇ ಒಂದು ಭಾಗವನ್ನು ಬಲಿದಾನ ಮಾಡುವುದು ಕಡ್ಡಾಯವಾಗಿದೆ.

**43**. ಯಾತ್ರಾರ್ಥಿಗೆ ಹೀಗೆ ಮಾಡಲು ಸಾಧ್ಯವಾಗದಿದ್ದಲ್ಲಿ ಅವನು ಹಜ್ಜ್‌ನ ಸಮಯದಲ್ಲಿ ಮೂರು ದಿನ ಮತ್ತು ಊರಿಗೆ ಮರಳಿದ ಬಳಿಕ ಏಳು ದಿನ ಉಪವಾಸ ಆಚರಿಸಬೇಕಾಗಿದೆ.

**44**. ಮೂರು ದಿನ ಉಪವಾಸ ಆಚರಿಸುವುದು ಅರಫಾ ದಿನಕ್ಕಿಂತ ಮುಂಚೆಯಾಗಿರಬೇಕಾಗಿದೆ. ಯಾಕೆಂದರೆ ಅರಫಾ ದಿನದಂದು ಅವನು ಉಪವಾಸ ಆಚರಿಸುವವನಾಗಿರಬಾರದು. ಅಥವಾ ದುಲ್‌ಹಿಜ್ಜಃ 11, 12, 13ರಂದು ಉಪವಾಸ ಆಚರಿಸಬಹುದು.

**45**. ಈ ರೀತಿ ಉಪವಾಸ ಆಚರಿಸುವುದು ನಿರಂತರವಾಗಿ ಅಥವಾ ದಿನ ಬಿಟ್ಟು ದಿನವಾಗಿದ್ದರೂ ತೊಂದರೆಯಿಲ್ಲ. ಆದರೆ ಅವುಗಳನ್ನು ಮಿನಾದಲ್ಲಿ ವ್ಯಯಿಸುವ ಮೂರು

ದಿನಗಳ ನಂತರಕ್ಕೆ ಮುಂದೂಡಬಾರದು. ಹಾಗೆಯೇ ಊರಿಗೆ ಮರಳಿದ ನಂತರ ನಿರ್ವಹಿಸುವ ಏಳು ದಿನಗಳ ಉಪವಾಸವನ್ನು ನಿರಂತರವಾಗಿ ಅಥವಾ ದಿನ ಬಿಟ್ಟು ದಿನವಾಗಿ ನಿರ್ವಹಿಸಬಹುದು.

**46**. ಋತುಸ್ರಾವವಿರುವ ಮಹಿಳೆ ಅಥವಾ ಹೆರಿಗೆ ರಕ್ತವಿರುವ ಮಹಿಳೆಯ ಹೊರತು ತವಾಫ್ ಅಲ್‌ವದಾಅ್ (ವಿದಾಯದ ತವಾಫ್) ನಿರ್ವಹಿಸುವುದು ಎಲ್ಲ ಯಾತ್ರಾರ್ಥಿಗಳ ಮೇಲೂ ಕಡ್ಡಾಯವಾಗಿದೆ.

**47**. ಮದೀನದಲ್ಲಿರುವ ಪ್ರವಾದಿ(ﷺ)ರವರ ಮಸೀದಿಯನ್ನು ಸಂದರ್ಶಿಸುವುದು ಸುನ್ನತ್ತಾಗಿದೆ. ಅದನ್ನು ಹಜ್ಜ್‌ಗೆ ಮೊದಲು ಅಥವಾ ನಂತರ ಅಥವಾ ವರ್ಷದ ಯಾವುದೇ ಅವಧಿಯಲ್ಲೂ ನಿರ್ವಹಿಸಬಹುದು.

**48**. ಪ್ರವಾದಿ(ﷺ)ರವರ ಮಸೀದಿಯನ್ನು ಪ್ರವೇಶಿಸಿದೊಡನೆ ಎರಡು ರಕ್‌ಅತ್ ತಹಿಯ್ಯತ್ ನಮಾಝ್ ನಿರ್ವಹಿಸುವುದು ಸುನ್ನತ್ತಾಗಿದೆ. ಇದನ್ನು ಮಸೀದಿಯ ಯಾವುದೇ ಭಾಗದಲ್ಲೂ ನಿರ್ವಹಿಸಬಹುದಾದರೂ ರೌದಾದಲ್ಲಿ ನಿರ್ವಹಿಸುವುದು ಸೂಕ್ತವಾಗಿದೆ.

**49**. ಪ್ರವಾದಿ(ﷺ)ರವರ ಗೋರಿಯನ್ನು ಅಥವಾ ಇತರ ಗೋರಿಗಳನ್ನು ಸಂದರ್ಶಿಸುವುದು ಪುರುಷರಿಗೆ

ಸುನ್ನತ್ತಾಗಿದೆ. ಆದರೆ ಅವುಗಳನ್ನು ಸಂದರ್ಶಿಸುವುದಕ್ಕಾಗಿಯೇ ಯಾತ್ರೆ ಕೈಗೊಂಡದ್ದಾಗಿರಕೂಡದು.

**50**. ಪ್ರವಾದಿ(ﷺ)ರವರ ಗೋರಿಯ ಆವರಣವನ್ನು ಸವರುವುದು, ಅದನ್ನು ಚುಂಬಿಸುವುದು ಅಥವಾ ಗೋರಿಗೆ ತವಾಫ್ ಮಾಡುವುದು ಇಸ್ಲಾಮ್ ನಿಷಿದ್ಧಗೊಳಿಸಿದ ಬಿದ್‌ಅತ್‌ಗಳಾಗಿವೆ. ಸಲಫು ಸ್ವಾಲಿಹ್‌ಗಳ ಪೈಕಿ ಯಾರೂ ಹೀಗೆ ಮಾಡಿಲ್ಲ. ಗೋರಿಗೆ ತವಾಫ್ ಮಾಡುವುದು ಪ್ರವಾದಿ (ﷺ)ರವರ ಪ್ರೀತಿ ಸಿಗಬೇಕು ಎಂಬ ಕಾರಣದಿಂದಾಗಿದ್ದರೆ ಅದು ಶಿರ್ಕ್ ಆಗಿದೆ.

**51**. ಬಯಕೆ ಈಡೇರುವುದಕ್ಕಾಗಿ ಅಥವಾ ಕಷ್ಟ ನಿವಾರಣೆಗಾಗಿ ಪ್ರವಾದಿ(ﷺ)ರವರೊಂದಿಗೆ ಪ್ರಾರ್ಥಿಸುವುದು ಶಿರ್ಕ್ ಆಗಿದೆ.

**52**. ಪ್ರವಾದಿ(ﷺ)ರವರು ಈಗ ಜೀವಿಸುತ್ತಿರುವುದು ಬರ್ಝಕ್‌ನ ಜೀವನದಲ್ಲಾಗಿದೆ. ಈ ಜೀವನವು ಅವರ ಮರಣದ ಮೊದಲ ಐಹಿಕ ಜೀವನದಂತಲ್ಲ. ಬರ್ಝಕ್ ಜೀವನದ ಪ್ರಕೃತಿ ಮತ್ತು ವಾಸ್ತವಿಕತೆಯನ್ನು ಅಲ್ಲಾಹು ಮಾತ್ರ ಅರಿತಿದ್ದಾನೆ.

**53**. ಪ್ರವಾದಿ(ﷺ)ರವರ ಗೋರಿಯ ಮುಂದೆ ನಿಂತು ಜನರು ಮಾಡುವ ಕೈಯೆತ್ತಿ ಪ್ರಾರ್ಥಿಸುವಂತಹ

ಕರ್ಮಗಳು ಇಸ್ಲಾಮಿಗೆ ಅನ್ಯವಾದ ಬಿದ್‌ಅತ್‌ಗಳಾಗಿವೆ.

**54**. ಪ್ರವಾದಿ(ﷺ)ರವರ ಗೋರಿಯನ್ನು ಸಂದರ್ಶಿಸುವುದು ಕೆಲವು ಜನರು ಭಾವಿಸಿಕೊಂಡಿರುವಂತೆ ಕಡ್ಡಾಯವಾಗಲಿ, ಹಜ್ಜ್ ಕರ್ಮದೊಂದಿಗೆ ಸೇರಿದ್ದಾಗಲಿ ಅಲ್ಲ.

**55**. ಪ್ರವಾದಿ(ﷺ)ರವರ ಗೋರಿ ಸಂದರ್ಶನಕ್ಕಾಗಿ ಯಾತ್ರೆ ಕೈಗೊಳ್ಳುವ ಕುರಿತು ಕೆಲವರು ಉಲ್ಲೇಖಿಸುವ ಹದೀಸ್‌ಗಳು ಒಂದೋ ದುರ್ಬಲವಾಗಿವೆ ಅಥವಾ ಮೌದೂಅ್ (ಕೃತಕ) ಆಗಿವೆ.

# ಅರಫಾತ್, ಪವಿತ್ರ ಸ್ಥಳಗಳು ಹಾಗೂ ಮತ್ತಿತರ ಸ್ಥಳಗಳಲ್ಲಿ ಪ್ರಾರ್ಥಿಸಬಹುದಾದ ಪ್ರಾರ್ಥನೆಗಳು

«اللَّهُمَّ إِنِّي أَسْأَلُكَ الْعَفْوَ وَالْعَافِيَةَ فِي الدُّنْيَا وَالْآخِرَةِ، اللَّهُمَّ إِنِّي أَسْأَلُكَ الْعَفْوَ وَالْعَافِيَةَ فِي دِينِي وَدُنْيَايَ وَأَهْلِي وَمَالِي، اللَّهُمَّ اسْتُرْ عَوْرَاتِي وَآمِنْ رَوْعَاتِي، اللَّهُمَّ احْفَظْنِي مِنْ بَيْنِ يَدَيَّ وَمِنْ خَلْفِي وَعَنْ يَمِينِي وَعَنْ شِمَالِي وَمِنْ فَوْقِي، وَأَعُوذُ بِعَظَمَتِكَ أَنْ أُغْتَالَ مِنْ تَحْتِي»

**(ಅಲ್ಲಾಹುಮ್ಮ ಇನ್ನೀ ಅಸ್‌ಅಲುಕಲ್ ಅಫ್ವ ವಲ್ ಆಫಿಯತ ಫಿದ್ದುನ್ಯಾ ವಲ್ ಆಖಿರತಿ, ಅಲ್ಲಾಹುಮ್ಮ ಇನ್ನೀ ಅಸ್‌ಅಲುಕಲ್ ಅಫ್ವ ವಲ್ ಆಫಿಯತ ಫೀ ದೀನೀ**

ವದುನ್ಯಾಯ ವಅಹ್ಲೀ ವಮಾಲೀ, ಅಲ್ಲಾಹುಮ್ಮಸ್ತುರ್ ಔರಾತೀ ವಆಮಿನ್ ರೌಆತೀ, ಅಲ್ಲಾಹುಮ್ಮಹ್ಫದ್‌ನೀ ಮಿನ್ ಬೈನಿ ಯದಯ್ಯ ವಮಿನ್ ಖಲ್ಫೀ ವಅನ್ ಯಮೀನೀ ವಅನ್ ಶಿಮಾಲೀ ವಮಿನ್ ಫೌಕೀ, ವಅಊದು ಬಿಅದಮತಿಕ ಅನ್ ಉಗ್ತಾಲ ಮಿನ್ ತಹ್ತೀ)

"ಓ ಅಲ್ಲಾಹ್! ಇಹಲೋಕದಲ್ಲೂ ಪರಲೋಕದಲ್ಲೂ ನನಗೆ ಕ್ಷಮೆ ಮತ್ತು ಸೌಖ್ಯ ನೀಡಬೇಕೆಂದು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ಓ ಅಲ್ಲಾಹ್! ನನ್ನ ಧರ್ಮದಲ್ಲಿ, ನನ್ನ ಐಹಿಕ ಜೀವನದಲ್ಲಿ, ನನ್ನ ಕುಟುಂಬದಲ್ಲಿ, ನನ್ನ ಸಂಪತ್ತಿನಲ್ಲಿ ನನಗೆ ಕ್ಷಮೆ ಮತ್ತು ಸೌಖ್ಯ ನೀಡಬೇಕೆಂದು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ಓ ಅಲ್ಲಾಹ್! ನನ್ನ ಕೊರತೆಗಳನ್ನು ಮರೆಮಾಚು, ನನ್ನ ಭಯವನ್ನು ನೀಗಿಸು. ಓ ಅಲ್ಲಾಹ್! ನನ್ನ ಮುಂದಿನಿಂದಲೂ, ನನ್ನ ಹಿಂದಿನಿಂದಲೂ, ನನ್ನ ಬಲಭಾಗದಿಂದಲೂ, ನನ್ನ ಎಡಭಾಗದಿಂದಲೂ, ನನ್ನ ಮೇಲ್ಭಾಗದಿಂದಲೂ ನನ್ನನ್ನು ಸಂರಕ್ಷಿಸು ಮತ್ತು ಕೆಳಭಾಗದಿಂದ ನನ್ನನ್ನು ವಂಚಿಸಲ್ಪಡುವುದರ ಬಗ್ಗೆ ನಿನ್ನ ಔನ್ನತ್ಯದೊಂದಿಗೆ ನಾನು ಅಭಯ ಯಾಚಿಸುತ್ತಿದ್ದೇನೆ."

«اللَّهُمَّ عَافِنِي فِي بَدَنِي، اللَّهُمَّ عَافِنِي فِي سَمْعِي،

اللَّهُمَّ عَافِنِي فِي بَصَرِي، لَا إِلَهَ إِلَّا أَنْتَ، اللَّهُمَّ إِنِّي أَعُوذُ بِكَ مِنَ الْكُفْرِ وَالْفَقْرِ، وَأَعُوذُ بِكَ مِنْ عَذَابِ الْقَبْرِ، لَا إِلَهَ إِلَّا أَنْتَ»

(ಅಲ್ಲಾಹುಮ್ಮ ಆಫಿನೀ ಫೀ ಬದನೀ, ಅಲ್ಲಾಹುಮ್ಮ ಆಫಿನೀ ಫೀ ಸಮ್‌ಈ, ಅಲ್ಲಾಹುಮ್ಮ ಆಫಿನೀ ಫೀ ಬಸರೀ, ಲಾ ಇಲಾಹ ಇಲ್ಲಾ ಅನ್ತ, ಅಲ್ಲಾಹುಮ್ಮ ಇನ್ನೀ ಅಊದು ಬಿಕ ಮಿನಲ್ ಕುಫ್ರಿ ವಲ್ ಫಕ್ರಿ, ವಅಊದು ಬಿಕ ಮಿನ್ ಅದಾಬಿಲ್ ಕಬ್ರಿ, ಲಾ ಇಲಾಹ ಇಲ್ಲಾ ಅನ್ತ್)

"ಓ ಅಲ್ಲಾಹ್! ನನ್ನ ದೇಹದಲ್ಲಿ ನನಗೆ ಸೌಖ್ಯವನ್ನು ನೀಡು, ಓ ಅಲ್ಲಾಹ್! ನನ್ನ ಶ್ರವಣದಲ್ಲಿ ನನಗೆ ಸೌಖ್ಯವನ್ನು ನೀಡು, ಓ ಅಲ್ಲಾಹ್! ನನ್ನ ದೃಷ್ಟಿಯಲ್ಲಿ ನನಗೆ ಸೌಖ್ಯವನ್ನು ನೀಡು, ನೀನಲ್ಲದೆ ಆರಾಧಿಸಲರ್ಹರಾದವರು ಯಾರೂ ಇಲ್ಲ. ಓ ಅಲ್ಲಾಹ್! ಸತ್ಯನಿಷೇಧದಿಂದ ಮತ್ತು ದಾರಿದ್ರ್ಯದಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ. ಮತ್ತು ಗೋರಿ ಶಿಕ್ಷೆಯಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ. ನೀನಲ್ಲದೆ ಆರಾಧಿಸಲರ್ಹರಾದವರು ಯಾರೂ ಇಲ್ಲ."

«اللَّهُمَّ أَنْتَ رَبِّي لَا إِلَهَ إِلَّا أَنْتَ خَلَقْتَنِي وَأَنَا عَبْدُكَ، وَأَنَا عَلَى عَهْدِكَ وَوَعْدِكَ مَا اسْتَطَعْتُ، أَعُوذُ بِكَ مِنْ شَرِّ مَا صَنَعْتُ، أَبُوءُ لَكَ بِنِعْمَتِكَ عَلَيَّ، وَأَبُوءُ بِذَنْبِي فَاغْفِرْ لِي إِنَّهُ لَا يَغْفِرُ الذُّنُوبَ إِلَّا أَنْتَ»

(ಅಲ್ಲಾಹುಮ್ಮ ಅನ್ತ ರಬ್ಬೀ ಲಾ ಇಲಾಹ ಇಲ್ಲಾ ಅನ್ತ ಖಲಕ್ತನೀ ವಅನ ಅಬ್ದುಕ, ವಅನ ಅಲಾ ಅಹ್ದಿಕ ವವಅ್‌ದಿಕ ಮಸ್ತತಅ್‌ತು, ಅಊದು ಬಿಕ ಮಿನ್ ಶರ್‍ರಿ ಮಾ ಸನಅ್‌ತು, ಅಬೂಉ ಲಕ ಬಿನಿಅ್‌ಮತಿಕ ಅಲಯ್ಯ, ವಅಬೂಉ ಬಿದಮ್ಬೀ ಫಗ್‌ಫಿರ್ ಲೀ ಇನ್ನಹೂ ಲಾ ಯಗ್‌ಫಿರು ದ್ದುನೂಬ ಇಲ್ಲಾ ಅನ್ತ್)

"ಓ ಅಲ್ಲಾಹ್! ನೀನು ನನ್ನ ಪ್ರಭುವಾಗಿರುವೆ. ನೀನಲ್ಲದೆ ಆರಾಧಿಸಲರ್ಹರಾದವರು ಯಾರೂ ಇಲ್ಲ. ನೀನು ನನ್ನನ್ನು ಸೃಷ್ಟಿಸಿರುವೆ ಮತ್ತು ನಾನು ನಿನ್ನ ದಾಸನಾಗಿರುವೆ. ನನಗೆ ಸಾಧ್ಯವಾಗುವಷ್ಟರ ಮಟ್ಟಿಗೆ ನಾನು ನಿನ್ನ ಕರಾರು ಮತ್ತು ವಾಗ್ದಾನವನ್ನು ಪಾಲಿಸುತ್ತಿರುವೆ. ನಾನು ಮಾಡಿದ ಕರ್ಮಗಳ

ಕೆಡುಕಿನಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ. ನೀನು ನನ್ನ ಮೇಲೆ ಸುರಿಸಿದ ಅನುಗ್ರಹಗಳಿಗಾಗಿ ನಾನು ನಿನಗೆ ಶರಣಾಗುತ್ತಿರುವೆ. ಮತ್ತು ನನ್ನ ಪಾಪಗಳಿಂದಾಗಿ ನಾನು ನಿನಗೆ ಶರಣಾಗುತ್ತಿರುವೆ. ಆದ್ದರಿಂದ ನನಗೆ ಕ್ಷಮೆ ನೀಡು. ಖಂಡಿತವಾಗಿಯೂ ನೀನಲ್ಲದೆ ಪಾಪಗಳನ್ನು ಕ್ಷಮಿಸುವವರಿಲ್ಲ."

«اللَّهُمَّ إِنِّي أَعُوذُ بِكَ مِنَ الْهَمِّ وَالْحُزْنِ وَأَعُوذُ بِكَ مِنَ الْعَجْزِ وَالْكَسَلِ، وَمِنَ الْبُخْلِ وَالْجُبْنِ وَأَعُوذُ بِكَ مِنْ غَلَبَةِ الدَّيْنِ وَقَهْرِ الرِّجَالِ»

(ಅಲ್ಲಾಹುಮ್ಮ ಇನ್ನೀ ಅಊದು ಬಿಕ ಮಿನಲ್ ಹಮ್ಮಿ ವಲ್ ಹುಝ್ನಿ, ವಅಊದು ಬಿಕ ಮಿನಲ್ ಅಜ್‌ಝಿ ವಲ್ ಕಸಲಿ, ವಮಿನಲ್ ಬುಖ್ಲಿ ವಲ್ ಜುಬುನಿ, ವಅಊದು ಬಿಕ ಮಿನ್ ಗಲಬತಿ ದ್ದೈನಿ ವಕಹ್ರಿ ರ್ರಿಜಾಲ್)

"ಓ ಅಲ್ಲಾಹ್! ದುಃಖ ಮತ್ತು ವ್ಯಥೆಯಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ, ಅಸಹಾಯಕತೆ ಮತ್ತು ಸೋಮಾರಿತನದಿಂದ, ಜಿಪುಣತೆಯಿಂದ ಮತ್ತು

ಜಿಗುಟುತನದಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ, ಋಣಬಾಧೆಯಿಂದ ಮತ್ತು ಜನರ ಆಕ್ರಮಣದಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ.”

«اللَّهُمَّ اجْعَلْ أَوَّلَ هَذَا الْيَوْمِ صَلَاحًا، وَأَوْسَطَهُ فَلَاحًا، وَآخِرَهُ نَجَاحًا، وَأَسْأَلُكَ خَيْرَيِ الدُّنْيَا وَالْآخِرَةِ يَا أَرْحَمَ الرَّاحِمِينَ»

(ಅಲ್ಲಾಹುಮ್ಮಜ್‌ಅಲ್ ಅವ್ವಲ ಹಾದಲ್ ಯೌಮಿ ಸಲಾಹನ್, ವಔಸತಹೂ ಫಲಾಹನ್, ವಆಖಿರಹೂ ನಜಾಹನ್, ವಅಸ್‌ಅಲುಕ ಖೈರಯಿದ್ದುನ್ಯಾ ವಲ್ ಆಖಿರತಿ ಯಾ ಅರ್ಹಮ ರ್‍ರಾಹಿಮೀನ್)

“ಓ ಅಲ್ಲಾಹ್! ಈ ದಿನದ ಮೊದಲ ಭಾಗವನ್ನು ಉತ್ತಮವಾಗಿಯೂ, ನಡುಭಾಗವನ್ನು ವಿಜಯವಾಗಿಯೂ, ಕೊನೆಯ ಭಾಗವನ್ನು ಯಶಸ್ಸಾಗಿಯೂ ಮಾಡು. ಇಹ ಮತ್ತು ಪರಗಳೆರಡರ ಒಳಿತನ್ನೂ ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ.”

«اللَّهُمَّ إِنِّي أَسْأَلُكَ الرِّضَى بَعْدَ الْقَضَاءِ، وَبَرْدَ الْعَيْشِ بَعْدَ الْمَوْتِ، وَلَذَّةَ النَّظَرِ إِلَى وَجْهِكَ الْكَرِيمِ، وَالشَّوْقَ إِلَى لِقَائِكَ فِي غَيْرِ ضَرَّاءَ مُضِرَّةٍ وَلَا فِتْنَةٍ مُضِلَّةٍ، وَأَعُوذُ بِكَ أَنْ أَظْلِمَ أَوْ أُظْلَمَ، أَوْ أَعْتَدِيَ أَوْ يُعْتَدَى عَلَيَّ، أَوْ أَكْتَسِبَ خَطِيئَةً أَوْ ذَنْبًا لَا تَغْفِرُهُ، وَأَعُوذُ بِكَ أَنْ أُرَدَّ إِلَى أَرْذَلِ الْعُمُرِ»

(ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ರ್‍ರಿದಾ ಬಅ್‌ದಲ್ ಕದಾಇ, ವಬರದಲ್ ಐಶಿ ಬಅ್‌ದಲ್ ಮೌತಿ, ವಲದ್ದತ ನ್ನದರಿ ಇಲಾ ವಜ್‌ಹಿಕಲ್ ಕರೀಮಿ, ವಶ್ಶೌಕ ಇಲಾ ಲಿಕಾಇಕ ಫೀ ಗೈರಿ ದರ್‍ರಾಅ ಮುದಿರ್‍ರತಿನ್ ವಲಾ ಫಿತ್ನತಿನ್ ಮುದಿಲ್ಲತಿನ್, ವಅಊದು ಬಿಕ ಅನ್ ಅಧ್ಲಿಮ ಅವ್ ಉಧ್ಲಮ, ಅವ್ ಅಅ್‌ತದಿಯ ಅವ್ ಯುಅ್‌ತದಾ ಅಲಯ್ಯ, ಅವ್ ಅಕ್ತಸಿಬ ಖತೀಅತನ್ ಅವ್ ದನ್ಬನ್ ಲಾ ತಗ್ಫಿರುಹೂ, ವಅಊದು ಬಿಕ ಅನ್ ಉರದ್ದ ಇಲಾ ಅರ್ದಲಿಲ್ ಉಮುರ್)

“ಓ ಅಲ್ಲಾಹ್, ನಿನ್ನ ವಿಧಿಯ ಬಗ್ಗೆ ತೃಪ್ತಿಯನ್ನು, ಮರಣಾನಂತರದ ಸುಖಕರ ಜೀವನವನ್ನು, ನಿನ್ನ ಆದರಣೀಯ ಮುಖದೆಡೆಗೆ ನೋಡುವ ಮಧುರವಾದ ನೋಟವನ್ನು ಮತ್ತು ಉಪದ್ರವಕಾರಿಯಾದ ವಿಪತ್ತು ಉಂಟಾಗದ ಮತ್ತು ದಾರಿಗೆಡಿಸುವ ಪರೀಕ್ಷೆಯಿಲ್ಲದ ರೀತಿಯಲ್ಲಿ ನಿನ್ನ ಭೇಟಿಯ ಹಂಬಲವನ್ನು ಬೇಡುತ್ತಿದ್ದೇನೆ. ಇತರರನ್ನು ಅಕ್ರಮಿಸುವುದರಿಂದ ಅಥವಾ ಇತರರಿಂದ ಅಕ್ರಮಕ್ಕೊಳಗಾಗುವುದರಿಂದ, ಅಕ್ರಮವೆಸಗುವುದರಿಂದ ಅಥವಾ ಅಕ್ರಮವೆಸಗಲಾಗುವುದರಿಂದ, ನೀನು ಕ್ಷಮಿಸದಂತಹ ಪಾಪವೆಸಗುವುದರಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ, ಮತ್ತು ವೃದ್ಧಾಪ್ಯದತ್ತ ತಳ್ಳಲ್ಪಡುವುದರಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ.”

«اللَّهُمَّ اهْدِنِي لِأَحْسَنِ الْأَعْمَالِ وَالْأَخْلَاقِ، لَا يَهْدِى لِأَحْسَنِهَا إِلَّا أَنْتَ، وَاصْرِفْ عَنِّي سَيِّئَهَا، لَا يَصْرِفُ عَنِّي سَيِّئَهَا إِلَّا أَنْتَ»

(ಅಲ್ಲಾಹುಮ್ಮಹ್ದಿನೀ ಲಿಅಹ್ಸನಿಲ್ ಅಅ್‌ಮಾಲಿ ವಲ್

ಅಖ್‌ಲಾಕಿ, ಲಾ ಯಹ್ದೀ ಲಿಅಹ್ಸನಿಹಾ ಇಲ್ಲಾ ಅನ್ತ, ವಸ್ರಿಫ್ ಅನ್ನೀ ಸಯ್ಯಿಅಹಾ, ಲಾ ಯಸ್ರಿಫು ಅನ್ನೀ ಸಯ್ಯಿಅಹಾ ಇಲ್ಲಾ ಅನ್ತ)

"ಓ ಅಲ್ಲಾಹ್! ಅತ್ಯುತ್ತಮವಾದ ಕರ್ಮದೆಡೆಗೆ ಮತ್ತು ಸ್ವಭಾವದೆಡೆಗೆ ನನ್ನನ್ನು ಮುನ್ನಡೆಸು. ಖಂಡಿತವಾಗಿಯೂ ಅತ್ಯುತ್ತಮವಾದ ಕರ್ಮ ಮತ್ತು ಸ್ವಭಾವದೆಡೆಗೆ ನೀನಲ್ಲದೆ ಮುನ್ನಡೆಸುವವರಿಲ್ಲ. ಹೀನವಾದ ಕರ್ಮ ಮತ್ತು ಸ್ವಭಾವವನ್ನು ನನ್ನಿಂದ ದೂರವಾಗಿಸು. ಹೀನವಾದ ಕರ್ಮ ಮತ್ತು ಸ್ವಭಾವವನ್ನು ನೀನಲ್ಲದೆ ದೂರವಾಗಿಸುವವರಿಲ್ಲ."

«اللَّهُمَّ أَصْلِحْ لِي دِينِي، وَوَسِّعْ لِي فِي دَارِي، وَبَارِكْ لِي فِي رِزْقِي»

(ಅಲ್ಲಾಹುಮ್ಮ ಅಸ್ಲಿಹ್ ಲೀ ದೀನೀ, ವವಸ್ಸಿಅ್ ಲೀ ಫೀ ದಾರೀ, ವಬಾರಿಕ್ ಲೀ ಫೀ ರಿಝ್ಕೀ)

"ಓ ಅಲ್ಲಾಹ್! ನನ್ನ ಧರ್ಮವನ್ನು ನನಗೆ ಉತ್ತಮ ವಾಗಿಸಿಕೊಡು, ನನ್ನ ಮನೆಯನ್ನು ನನಗೆ ವಿಶಾಲವಾಗಿಸಿಕೊಡು ಮತ್ತು ನನ್ನ ಅನ್ನಾಧಾರದಲ್ಲಿ ನನಗೆ ಸಮೃದ್ಧಿಯನ್ನು ದಯಪಾಲಿಸು."

«اللَّهُمَّ إِنِّي أَعُوذُ بِكَ مِنَ الْقَسْوَةِ وَالْغَفْلَةِ وَالذِّلَّةِ وَالْمَسْكَنَةِ، وَأَعُوذُ بِكَ مِنَ الْكُفْرِ وَالْفُسُوقِ وَالشِّقَاقِ وَالنِّفَاقِ وَالسُّمْعَةِ وَالرِّيَاءِ، وَأَعُوذُ بِكَ مِنَ الصَّمَمِ، وَالْبَكَمِ وَالْجُذَامِ وَسَيِّئِ الْأَسْقَامِ»

(ಅಲ್ಲಾಹುಮ್ಮ ಇನ್ನೀ ಅಊದು ಬಿಕ ಮಿನಲ್ ಕಸ್ವತಿ ವಲ್ ಗಫ್ಲತಿ ವದ್ದಿಲ್ಲತಿ ವಲ್ ಮಸ್ಕನತಿ, ವಅಊದು ಬಿಕ ಮಿನಲ್ ಕುಫ್ರಿ ವಲ್ ಫುಸೂಕಿ, ವಶ್ಶಿಕಾಕಿ ವನ್ನಿಫಾಕಿ ವಸ್ಸುಮ್‌ಅತಿ ವರ್‍ರಿಯಾಇ, ವಅಊದು ಬಿಕ ಮಿನ ಸ್ಸಮಮಿ, ವಲ್ ಬಕಮಿ ವಲ್ ಜುದಾಮಿ ವಸಯ್ಯಿಇಲ್ ಅಸ್ಕಾಮ್)

“ಓ ಅಲ್ಲಾಹ್! ಕ್ರೌರ್ಯತನ, ನಿರ್ಲಕ್ಷ್ಯತನ, ನಿಂದ್ಯತೆ ಮತ್ತು ದೈನ್ಯತೆಯಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ. ಅವಿಶ್ವಾಸ, ಅವಿಧೇಯತೆ, ದುರಭಿಮಾನ, ಕಾಪಟ್ಯತೆ, ತೋರ್ಪಡಿಕೆ ಮತ್ತು ಜನಮನ್ನಣೆಯಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ. ಅಂಧತೆ, ಕಿವುಡುತನ, ಕುಷ್ಠರೋಗ ಮತ್ತು ಕೆಟ್ಟರೋಗಗಳಿಂದ ನಾನು

ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ."

«اللَّهُمَّ آتِ نَفْسِي تَقْوَاهَا، وَزَكِّهَا أَنْتَ خَيْرُ مَنْ زَكَّاهَا، أَنْتَ وَلِيُّهَا وَمَوْلَاهَا»

(ಅಲ್ಲಾಹುಮ್ಮ ಆತಿ ನಫ್ಸೀ ತಕ್ವಾಹಾ, ವಝಕ್ಕಿಹಾ ಅನ್ತ ಖೈರು ಮನ್ ಝಕ್ಕಾಹಾ, ಅನ್ತ ವಲಿಯ್ಯುಹಾ ವಮೌಲಾಹಾ)

"ಓ ಅಲ್ಲಾಹ್! ನನ್ನ ಆತ್ಮಕ್ಕೆ ಭಯಭಕ್ತಿಯನ್ನು ನೀಡು, ಅದನ್ನು ಶುದ್ಧೀಕರಿಸು, ಅದನ್ನು ಶುದ್ಧೀಕರಿಸಲು ನೀನೇ ಅತ್ಯುತ್ತಮನು, ನೀನು ಅದರ ಒಡೆಯನೂ ಸಂರಕ್ಷಕನೂ ಆಗಿರುವೆ."

«اللَّهُمَّ إِنِّي أَعُوذُ بِكَ مِنْ عِلْمٍ لَا يَنْفَعُ، وَقَلْبٍ لَا يَخْشَعُ، وَنَفْسٍ لَا تَشْبَعُ، وَدَعْوَةٍ لَا يُسْتَجَابُ لَهَا»

(ಅಲ್ಲಾಹುಮ್ಮ ಇನ್ನೀ ಅಊದು ಬಿಕ ಮಿನ್ ಇಲ್ಮಿನ್ ಲಾ ಯನ್‌ಫಉ, ವಕಲ್ಬಿನ್ ಲಾ ಯಖ್‌ಶಉ, ವನಫ್ಸಿನ್

ಲಾ ತಶ್‌ಬಉ, ವದಅ್‌ವತಿನ್ ಲಾ ಯುಸ್ತಜಾಬು ಲಹಾ)

"ಓ ಅಲ್ಲಾಹ್! ಉಪಕಾರ ನೀಡದ ವಿದ್ಯೆ, ಭಯಭಕ್ತಿಯಿಲ್ಲದ ಹೃದಯ, ಸಂತೃಪ್ತವಾಗದ ಆತ್ಮ ಮತ್ತು ಉತ್ತರ ದೊರೆಯದ ಪ್ರಾರ್ಥನೆಯಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ."

«اللَّهُمَّ إِنِّي أَعُوذُ بِكَ مِنْ شَرِّ مَا عَمِلْتُ وَمِنْ شَرِّ مَا لَمْ أَعْمَلْ، وَ أَعُوذُ بِكَ مِنْ شَرِّ مَا عَلِمْتُ وَمِنْ شَرِّ مَا لَمْ أَعْلَمْ، اللَّهُمَّ إِنِّي أَعُوذُ بِكَ مِنْ زَوَالِ نِعْمَتِكَ، وَتَحَوُّلِ عَافِيَتِكَ، وَفُجَاءَةِ نِقْمَتِكَ، وَجَمِيعِ سَخَطِكَ»

(ಅಲ್ಲಾಹುಮ್ಮ ಇನ್ನೀ ಅಊದು ಬಿಕ ಮಿನ್ ಶರ್ರಿ ಮಾ ಅಮಿಲ್ತು ವಮಿನ್ ಶರ್ರಿ ಮಾ ಲಮ್ ಅಅ್‌ಮಲ್, ವಅಊದು ಬಿಕ ಮಿನ್ ಶರ್ರಿ ಮಾ ಅಲಿಮ್ತು ವಮಿನ್ ಶರ್ರಿ ಮಾ ಲಮ್ ಅಅ್‌ಲಮ್, ಅಲ್ಲಾಹುಮ್ಮ ಇನ್ನೀ ಅಊದು ಬಿಕ ಮಿನ್ ಝವಾಲಿ ನಿಅ್‌ಮತಿಕ, ವತಹವ್ವುಲಿ

ಆಫಿಯತಿಕ, ವಪುಜಾಅತಿ ನಿಕ್ಮತಿಕ ವಜಮೀಇ ಸಖ್ತಿಕ್)

"ಓ ಅಲ್ಲಾಹ್! ನಾನು ಮಾಡಿರುವ ಕೆಡುಕಿನಿಂದ ಮತ್ತು ನಾನು ಮಾಡಿರದ ಕೆಡುಕಿನಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ. ನಾನು ಅರಿತಿರುವ ಕೆಡುಕಿನಿಂದ ಮತ್ತು ನಾನು ಅರಿತಿರದ ಕೆಡುಕಿನಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ. ಓ ಅಲ್ಲಾಹ್! ನಿನ್ನ ಅನುಗ್ರಹ ನಿವಾರಣೆಗೊಳ್ಳುವುದರಿಂದ, ನಿನ್ನ ಸಂರಕ್ಷಣೆ ಬದಲಾಗು ವುದರಿಂದ, ನಿನ್ನ ಅನಿರೀಕ್ಷಿತ ಶಿಕ್ಷೆಯಿಂದ ಮತ್ತು ನಿನ್ನೆಲ್ಲ ಕ್ರೋಧಗಳಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸು ತ್ತಿದ್ದೇನೆ."

«اللَّهُمَّ إِنِّي أَعُوذُ بِكَ مِنَ الْهَدْمِ وَالتَّرَدِّي وَمِنَ الْغَرْقِ وَالْحَرْقِ وَالْهَرَمِ، وَأَعُوذُ بِكَ مِنْ أَنْ يَتَخَبَّطَنِي الشَّيْطَانُ عِنْدَ الْمَوْتِ، وَأَعُوذُ بِكَ مِنْ أَنْ أَمُوتَ لَدِيغًا، وَأَعُوذُ بِكَ مِنْ طَمَعٍ يَهْدِي إِلَى طَبْعٍ»

(ಅಲ್ಲಾಹುಮ್ಮ ಇನ್ನೀ ಅಊದು ಬಿಕ ಮಿನಲ್ ಹದ್ಮಿ ವತ್ತರದ್ದೀ ವಮಿನಲ್ ಗರ್ಕಿ ವಲ್‌ಹರ್ಕಿ ವಲ್ ಹರಮಿ, ವಅಊದು ಬಿಕ ಮಿನ್ ಅನ್ ಯತಖಬ್ಬತನಿ ಶೈತಾನು ಇಂದಲ್ ಮೌತಿ, ವಅಊದು ಬಿಕ ಮಿನ್ ಅನ್ ಅಮೂತ ಲದೀಗನ್, ವಅಊದು ಬಿಕ ಮಿನ್ ತಮಇನ್ ಯಹ್ದೀ ಇಲಾ ತಬ್‌ಅ್)

"ಓ ಅಲ್ಲಾಹ್! ಕಟ್ಟಡ ಕೆಡವಿ ಬಿದ್ದು, ನಾಶವಾಗಿ, ಮುಳುಗಿ, ಸುಟ್ಟು ಮತ್ತು ವೃದ್ಧಾಪ್ಯದಿಂದ ಮರಣ ಹೊಂದುವುದರಿಂದ, ಮರಣದ ವೇಳೆ ಪಿಶಾಚಿಯ ಸ್ಪರ್ಶದಿಂದ ಮತ್ತು ವಿಷ ಜಂತುಗಳು ಕಚ್ಚಿ ಮರಣಹೊಂದುವುದರಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ. ದುಷ್ಕರ್ಮಗಳತ್ತ ಸಾಗಿಸುವ ದುರಾಸೆಯಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ."

«اللَّهُمَّ إِنِّي أَعُوذُ بِكَ مِنْ مُنْكَرَاتِ الْأَخْلَاقِ وَالْأَعْمَالِ وَالْأَهْوَاءِ وَالْأَدْوَاءِ، وَأَعُوذُ بِكَ مِنْ غَلَبَةِ الدَّيْنِ، وَقَهْرِ الْعَدُوِّ، وَشَمَاتَةِ الْأَعْدَاءِ»

(ಅಲ್ಲಾಹುಮ್ಮ ಇನ್ನೀ ಅಊದು ಬಿಕ ಮಿನ್ ಮುನ್ಕಿರಾತಿಲ್ ಅಖ್ಲಾಕಿ ವಲ್ ಅಅ್‌ಮಾಲಿ ವಲ್ ಅಹ್ವಾಇ ವಲ್ ಔದಾಇ, ವಅಊದು ಬಿಕ ಮಿನ್ ಗಲಬತಿ ದ್ದೈನಿ, ವಕಹ್ರಿಲ್ ಅದುವ್ವಿ, ವಶಮಾತತಿಲ್ ಅಅ್‌ದಾಅ್)

"ಓ ಅಲ್ಲಾಹ್! ದುಷ್ಟ ಸ್ವಭಾವ, ಕರ್ಮ, ದೇಹೇಚ್ಛೆ ಮತ್ತು ರೋಗದಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ. ಸಾಲಬಾಧೆಯಿಂದ, ಶತ್ರುವಿನ ಆಕ್ರಮಣದಿಂದ ಮತ್ತು ಶತ್ರುಗಳ ಪೀಡನೆಯಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ."

«اللَّهُمَّ أَصْلِحْ لِي دِينِي الَّذِي هُوَ عِصْمَةُ أَمْرِي وَأَصْلِحْ لِي دُنْيَايَ الَّتِي فِيهَا مَعَاشِي وَأَصْلِحْ لِي آخِرَتِي الَّتِي فِيهَا مَعَادِي وَاجْعَلِ الْحَيَاةَ زِيَادَةً لِي فِي كُلِّ خَيْرٍ وَاجْعَلِ الْمَوْتَ رَاحَةً لِي مِنْ كُلِّ شَرٍّ، رَبِّ أَعِنِّي وَلَا تُعِنْ عَلَيَّ وَانْصُرْنِي وَلَا تَنْصُرْ عَلَيَّ وَاهْدِنِي وَيَسِّرِ الْهُدَى عَلَيَّ»

(ಅಲ್ಲಾಹುಮ್ಮ ಅಸ್ಲಿಹ್ ಲೀ ದೀನಿಲ್ಲದೀ ಹುವ ಇಸ್ಮತು ಅಮ್ರೀ ವಅಸ್ಲಿಹ್ ಲೀ ದುನ್ಯಾಯಲ್ಲತೀ ಫೀಹಾ ಮಆಶೀ ವಅಸ್ಲಿಹ್ ಲೀ ಆಖಿರತಿಲ್ಲತೀ ಫೀಹಾ ಮಆದೀ ವಜ್‌ಅಲಿಲ್ ಹಯಾತ ಝಿಯಾದತನ್ ಲೀ ಫೀ ಕುಲ್ಲಿ ಖೈರಿನ್ ವಜ್‌ಅಲಿಲ್ ಮೌತ ರಾಹತನ್ ಲೀ ಮಿನ್ ಕುಲ್ಲಿ ಶರ್‍ರಿನ್, ರಬ್ಬಿ ಅಇನ್ನೀ ವಲಾ ತುಇನ್ ಅಲಯ್ಯ ವನ್ಸುರ್‌ನೀ ವಲಾ ತನ್ಸುರ್ ಅಲಯ್ಯ ವಹ್ದಿನೀ ವಯಸ್ಸಿರಿಲ್ ಹುದಾ ಅಲಯ್ಯ)

"ಓ ಅಲ್ಲಾಹ್, ನನ್ನ ಕಾರ್ಯಗಳ ಕೇಂದ್ರವಾಗಿರುವ ನನ್ನ ಧರ್ಮವನ್ನು ನನಗೆ ಉತ್ತಮಗೊಳಿಸು, ನಾನು ಬದುಕ ಬೇಕಾಗಿರುವ ನನ್ನ ಇಹಲೋಕವನ್ನು ನನಗೆ ಉತ್ತಮಗೊಳಿಸು, ನಾನು ಮರಳಬೇಕಾಗಿರುವ ನನ್ನ ಪರಲೋಕವನ್ನು ನನಗೆ ಉತ್ತಮಗೊಳಿಸು. ಬದುಕನ್ನು ಪ್ರತಿಯೊಂದು ಒಳಿತಿನಲ್ಲೂ ನನಗೆ ವರ್ಧಿಸು ಮತ್ತು ಮರಣವನ್ನು ಪ್ರತಿಯೊಂದು ಕೆಡುಕಿನಿಂದಲೂ ನನಗೆ ಮುಕ್ತವಾಗಿಸು. ನನ್ನ ಪ್ರಭೂ, ನನಗೆ ಸಹಾಯ ಮಾಡು, ನನ್ನ ವಿರುದ್ಧ ಸಹಾಯ ಮಾಡದಿರು. ನನಗೆ ನೆರವು ನೀಡು, ನನ್ನ ವಿರುದ್ಧ ನೆರವು ನೀಡದಿರು. ನನ್ನನ್ನು ಮುನ್ನಡೆಸು ಮತ್ತು ಮಾರ್ಗದರ್ಶನವನ್ನು ನನಗೆ ಸುಲಭೀಕರಿಸು."

«اللَّهُمَّ اجْعَلْنِي ذَكَّارًا لَكَ، شَكَّارًا لَكَ، مِطْوَاعًا لَكَ، مُخْبِتًا إِلَيْكَ، أَوَّاهًا مُنِيبًا، رَبِّ تَقَبَّلْ تَوْبَتِي، وَاغْسِلْ حَوْبَتِي، وَأَجِبْ دَعْوَتِي، وَثَبِّتْ حُجَّتِي، وَاهْدِ قَلْبِي، وَسَدِّدْ لِسَانِي، وَاسْلُلْ سَخِيمَةَ صَدْرِي»

(ಅಲ್ಲಾಹುಮ್ಮಜ್‌ಅಲ್‌ನೀ ದಕ್ಕಾರನ್ ಲಕ, ಶಕ್ಕಾರನ್ ಲಕ, ಮಿತ್ವಾಅನ್ ಲಕ, ಮುಖ್ಬಿತನ್ ಇಲೈಕ, ಅವ್ವಾಹನ್ ಮುನೀಬನ್, ರಬ್ಬಿ ತಕಬ್ಬಲ್ ತೌಬತೀ, ವಗ್ಸಿಲ್ ಹೌಬತೀ, ವಅಜಿಬ್ ದಅ್‌ವತೀ, ವಸಬ್ಬಿತ್ ಹುಜ್ಜತೀ, ವಹ್ದಿ ಕಲ್ಬೀ, ವಸದ್ದಿದ್ ಲಿಸಾನೀ, ವಸ್ಲುಲ್ ಸಖೀಮತ ಸದ್ರೀ)

"ಓ ಅಲ್ಲಾಹ್! ನಿನ್ನನ್ನು ಅತ್ಯಧಿಕ ಸ್ಮರಿಸುವಂತೆ, ನಿನಗೆ ಅತ್ಯಧಿಕ ಕೃತಜ್ಞತೆ ಸಲ್ಲಿಸುವಂತೆ, ನಿನ್ನನ್ನು ಅನುಸರಿಸುವಂತೆ, ನಿನಗೆ ವಿಧೇಯವಾಗಿರುವಂತೆ ಮತ್ತು ನಿನ್ನೆಡೆಗೆ ಅತ್ಯಧಿಕ ಪಶ್ಚಾತ್ತಾಪದೊಂದಿಗೆ ಮರಳುವಂತೆ ನನ್ನನ್ನು ಮಾಡು. ನನ್ನ ಪ್ರಭೂ, ನನ್ನ ಪಶ್ಚಾತ್ತಾಪವನ್ನು ಸ್ವೀಕರಿಸು, ನನ್ನ ಪಾಪವನ್ನು ತೊಳೆದುಬಿಡು, ನನ್ನ ಪ್ರಾರ್ಥನೆಗೆ ಉತ್ತರಿಸು,

ನನ್ನ ಆಧಾರವನ್ನು ದೃಢಗೊಳಿಸು, ನನ್ನ ಹೃದಯವನ್ನು ಮುನ್ನಡೆಸು, ನನ್ನ ನಾಲಗೆಯನ್ನು ನೇರವಾಗಿಸು ಮತ್ತು ನನ್ನ ಹೃದಯದ ಮಾಲಿನ್ಯವನ್ನು ನಿವಾರಿಸು."

«اللَّهُمَّ إِنِّي أَسْأَلُكَ الثَّبَاتَ فِي الْأَمْرِ، وَالْعَزِيمَةَ عَلَى الرُّشْدِ، وَأَسْأَلُكَ شُكْرَ نِعْمَتِكَ، وَحُسْنَ عِبَادَتِكَ، وَأَسْأَلُكَ قَلْبًا سَلِيمًا، وَلِسَانًا صَادِقًا، وَأَسْأَلُكَ مِنْ خَيْرِ مَا تَعْلَمُ، وَأَعُوذُ بِكَ مِنْ شَرِّ مَا تَعْلَمُ، وَأَسْتَغْفِرُكَ لِمَا تَعْلَمُ، إِنَّكَ عَلَّامُ الْغُيُوبِ»

(ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಸ್ಸಿಬಾತ ಫಿಲ್ ಅಮ್ರಿ, ವಲ್ ಅಝೀಮತ ಅಲ ರ್ರುಶ್ದಿ, ವಅಸ್‌ಅಲುಕ ಶುಕ್ರ ನಿಅ್‌ಮತಿಕ, ವಹುಸ್ನ ಇಬಾದತಿಕ, ವಅಸ್‌ಅಲುಕ ಕಲ್ಬನ್ ಸಲೀಮನ್, ವಲಿಸಾನನ್ ಸಾದಿಕನ್, ವಅಸ್‌ಅಲುಕ ಮಿನ್ ಖೈರಿ ಮಾ ತಅ್‌ಲಮು, ವಅಊದು ಬಿಕ ಮಿನ್ ಶರ್ರಿ ಮಾ ತಅ್‌ಲಮು, ವಅಸ್ತಗ್ಫಿರುಕ ಲಿಮಾ ತಅ್‌ಲಮು, ಇನ್ನಕ ಅಲ್ಲಾಮುಲ್ ಗುಯೂಬ್)

"ಓ ಅಲ್ಲಾಹ್! ನಾನು ನಿನ್ನೊಂದಿಗೆ ಧರ್ಮದಲ್ಲಿ ದೃಢತೆಯನ್ನು ಮತ್ತು ಮಾರ್ಗದರ್ಶನ ಅನುಸರಿಸುವುದರಲ್ಲಿ ಮನೋದಾರ್ಢ್ಯತೆಯನ್ನು ಬೇಡುತ್ತಿದ್ದೇನೆ. ನಿನ್ನ ಅನುಗ್ರಹಗಳಿಗೆ ಕೃತಜ್ಞತೆ ಸಲ್ಲಿಸುವುದನ್ನು ಮತ್ತು ನಿನ್ನ ಆರಾಧನೆಯಲ್ಲಿ ಉತ್ತಮತೆಯನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ಸ್ವಸ್ಥ ಹೃದಯವನ್ನು ಮತ್ತು ಸತ್ಯಸಂಧ ನಾಲಗೆಯನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ನೀನು ಅರಿತಿರುವ ಒಳಿತನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ನೀನು ಅರಿತಿರುವ ಕೆಡುಕಿನಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ. ನೀನು ಅರಿತಿರುವುದರ ಕುರಿತು ನಾನು ನಿನ್ನೊಂದಿಗೆ ಪಾಪಮುಕ್ತಿ ಬೇಡುತ್ತಿದ್ದೇನೆ. ಖಂಡಿತವಾಗಿಯೂ ನೀನು ಅಗೋಚರ ವಿಷಯಗಳನ್ನು ಅರಿತವನಾಗಿರುವೆ."

«اللَّهُمَّ أَلْهِمْنِي رُشْدِي وَأَعِذْنِي مِنْ شَرِّ نَفْسِي، اللَّهُمَّ إِنِّي أَسْأَلُكَ فِعْلَ الْخَيْرَاتِ وَتَرْكَ الْمُنْكَرَاتِ، وَحُبَّ الْمَسَاكِينِ، وَأَنْ تَغْفِرَ لِي وَتَرْحَمَنِي، وَإِذَا أَرَدْتَ بِعِبَادِكَ فِتْنَةً، فَتَوَفَّنِي إِلَيْكَ غَيْرَ مَفْتُونٍ،

اللَّهُمَّ إِنِّي أَسْأَلُكَ حُبَّكَ وَحُبَّ مَنْ يُحِبُّكَ، وَحُبَّ كُلِّ عَمَلٍ يُقَرِّبُنِي إِلَى حُبِّكَ»

(ಅಲ್ಲಾಹುಮ್ಮ ಅಲ್‌ಹಿಮ್‌ನೀ ರುಶ್ದೀ ವಅಇದ್‌ನೀ ಮಿನ್ ಶರ್ರಿ ನಫ್ಸೀ, ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಫಿಅ್‌ಲಲ್ ಖೈರಾತಿ ವತರ್ಕಲ್ ಮುನ್ಕರಾತಿ, ವಹುಬ್ಬಲ್ ಮಸಾಕೀನಿ, ವಅನ್ ತಗ್ಫಿರ ಲೀ ವತರ್‌ಹಮನೀ, ವಇದಾ ಅರದ್ತ ಬಿಇಬಾದಿಕ ಫಿತ್ನತನ್, ಫತವಫ್ಫನೀ ಇಲೈಕ ಗೈರ ಮಫ್ತೂನಿನ್, ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಹುಬ್ಬಕ ವಹುಬ್ಬ ಮನ್ ಯುಹಿಬ್ಬುಕ, ವಹುಬ್ಬ ಕುಲ್ಲಿ ಅಮಲಿನ್ ಯುಕರ್‍ರಿಬುನೀ ಇಲಾ ಹುಬ್ಬಿಕ್)

“ಓ ಅಲ್ಲಾಹ್! ನನ್ನ ಮಾರ್ಗದರ್ಶನವನ್ನು ನನಗೆ ತೋರಿಸಿಕೊಡು ಮತ್ತು ನನ್ನ ಶರೀರದ ಕೆಡುಕಿನಿಂದ ನನ್ನನ್ನು ಕಾಪಾಡು. ಓ ಅಲ್ಲಾಹ್! ನಾನು ಒಳಿತುಗಳನ್ನು ಮಾಡುವಂತೆ ಮತ್ತು ಕೆಡುಕುಗಳನ್ನು ವರ್ಜಿಸುವಂತೆ ಮತ್ತು ಬಡವರನ್ನು ಪ್ರೀತಿಸುವಂತೆ ಮಾಡಬೇಕೆಂದು ನಿನ್ನೊಂದಿಗೆ ಬೇಡುತ್ತಿದ್ದೇನೆ. ನನ್ನನ್ನು ಕ್ಷಮಿಸಬೇಕೆಂದು ಮತ್ತು ನನ್ನ ಮೇಲೆ ಕರುಣೆ ತೋರಬೇಕೆಂದು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ನೀನು ನಿನ್ನ ದಾಸರನ್ನು ಪರೀಕ್ಷಿಸಬೇಕೆಂದು ಬಯಸಿದರೆ, ಪರೀಕ್ಷಿಸದ

ರೀತಿಯಲ್ಲಿ ನನ್ನನ್ನು ಮರಣಗೊಳಿಸು. ಓ ಅಲ್ಲಾಹ್! ನಿನ್ನ ಪ್ರೀತಿಯನ್ನು, ನಿನ್ನನ್ನು ಪ್ರೀತಿಸುವವರ ಪ್ರೀತಿಯನ್ನು ಮತ್ತು ನಿನ್ನ ಪ್ರೀತಿಯತ್ತ ನನ್ನನ್ನು ಸಮೀಪಗೊಳಿಸುವ ಕರ್ಮದೊಂದಿಗಿರುವ ಪ್ರೀತಿಯನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ."

«اللَّهُمَّ إِنِّي أَسْأَلُكَ خَيْرَ الْمَسْأَلَةِ، وَخَيْرَ الدُّعَاءِ، وَخَيْرَ النَّجَاحِ، وَخَيْرَ الثَّوَابِ، وَثَبِّتْنِي وَثَقِّلْ مَوَازِينِي، وَحَقِّقْ إِيمَانِي، وَارْفَعْ دَرَجَتِي، وَتَقَبَّلْ صَلَاتِي، وَعِبَادَاتِي، وَاغْفِرْ خَطِيئَاتِي، وَأَسْأَلُكَ الدَّرَجَاتِ الْعُلَى مِنَ الْجَنَّةِ»

(ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಖೈರಲ್ ಮಸ್‌ಅಲತಿ, ವಖೈರ ದ್ದುಆಇ, ವಖೈರ ನ್ನಜಾಹಿ, ವಖೈರ ಸ್ಸವಾಬಿ, ವಸಬ್ಬಿತ್‌ನೀ ವಸಕ್ಕಿಲ್ ಮವಾಝೀನೀ, ವಹಕ್ಕಿಕ್ ಈಮಾನೀ, ವರ್‌ಫಅ್ ದರಜತೀ, ವತಕಬ್ಬಲ್ ಸಲಾತೀ, ವಇಬಾದಾತೀ, ವಗ್‌ಫಿರ್ ಖತೀಆತೀ, ವಅಸ್‌ಅಲುಕ

ದ್ದರಜಾತಿಲ್ ಉಲಾ ಮಿನಲ್ ಜನ್ನಃ)

"ಓ ಅಲ್ಲಾಹ್! ಉತ್ತಮವಾದ ಬೇಡಿಕೆಯನ್ನು, ಉತ್ತಮವಾದ ಪ್ರಾರ್ಥನೆಯನ್ನು, ಉತ್ತಮವಾದ ಯಶಸ್ಸನ್ನು, ಉತ್ತಮವಾದ ಪ್ರತಿಫಲವನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ನನ್ನನ್ನು ದೃಢಗೊಳಿಸು, ನನ್ನ ತಕ್ಕಡಿಯನ್ನು ಭಾರವಾಗಿಸು, ನನ್ನ ವಿಶ್ವಾಸವನ್ನು ನೈಜೀಕರಿಸು, ನನ್ನ ಪದವಿಯನ್ನು ಉನ್ನತವಾಗಿಸು, ನನ್ನ ನಮಾಝ್ ಮತ್ತು ಇಬಾದತ್‌ಗಳನ್ನು ಸ್ವೀಕರಿಸು, ನನ್ನ ಪಾಪಗಳನ್ನು ಮನ್ನಿಸು. ಸ್ವರ್ಗದ ಅತ್ಯುನ್ನತ ಪದವಿಗಳನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ."

«اللَّهُمَّ إِنِّي أَسْأَلُكَ فَوَاتِحَ الْخَيْرِ، وَخَوَاتِمَهُ، وَجَوَامِعَهُ، وَأَوَّلَهُ وَآخِرَهُ، وَظَاهِرَهُ وَبَاطِنَهُ، وَالدَّرَجَاتِ الْعُلَى مِنَ الْجَنَّةِ، اللَّهُمَّ إِنِّي أَسْأَلُكَ أَنْ تَرْفَعَ ذِكْرِي، وَتَضَعَ وِزْرِي، وَتُطَهِّرَ قَلْبِي، وَتُحَصِّنَ فَرْجِي، وَتَغْفِرَ لِي ذُنُوبِي، وَأَسْأَلُكَ الدَّرَجَاتِ الْعُلَى مِنَ الْجَنَّةِ، اللَّهُمَّ إِنِّي أَسْأَلُكَ أَنْ

تُبَارِكَ فِي سَمْعِي، وَفِي بَصَرِي، وَفِي خَلْقِي، وَفِي خُلُقِي، وَفِي أَهْلِي وَفِي مَحْيَايَ، وَفِي عَمَلِي، وَتَقَبَّلْ حَسَنَاتِي، وَأَسْأَلُكَ الدَّرَجَاتِ الْعُلَى مِنَ الْجَنَّةِ»

(ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಫವಾತಿಹಲ್ ಖೈರಿ, ವಖವಾತಿಮಹೂ, ವಜವಾಮಿಅಹೂ, ವಅವ್ವಲಹೂ ವಆಖಿರಹೂ, ವದಾಹಿರಹೂ ವಬಾತಿನಹೂ, ವದ್ದರಜಾತಿಲ್ ಉಲಾ ಮಿನಲ್ ಜನ್ನಃ, ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಅನ್ ತರ್ಫಅ ದಿಕ್ರೀ, ವತದಅ ವಿಝ್ರೀ, ವತುತಹ್ಹಿರ ಕಲ್ಬೀ, ವತುಹಸ್ಸಿನ ಫರ್ಜೀ, ವತಗ್ಫಿರ ಲೀ ದುನೂಬೀ, ವಅಸ್‌ಅಲುಕ ದ್ದರಜಾತಿಲ್ ಉಲಾ ಮಿನಲ್ ಜನ್ನಃ, ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಅನ್ ತುಬಾರಿಕ ಫೀ ಸಮ್‌ಈ, ವಫೀ ಬಸರೀ, ವಫೀ ಖಲ್ಕೀ, ವಫೀ ಖುಲುಕೀ, ವಫೀ ಅಹ್ಲೀ, ವಫೀ ಮಹ್ಯಾಯ, ವಫೀ ಅಮಲೀ, ವತಕಬ್ಬಲ್ ಹಸನಾತೀ, ವಅಸ್‌ಅಲುಕ ದ್ದರಜಾತಿಲ್ ಉಲಾ ಮಿನಲ್ ಜನ್ನಃ)

"ಓ ಅಲ್ಲಾಹ್! ಒಳಿತಿನ ಆರಂಭಗಳನ್ನು, ಅದರ ಅಂತ್ಯಗಳನ್ನು, ಅದರ ಸಂಪೂರ್ಣತೆಗಳನ್ನು, ಅದರ ಆರಂಭ ಮತ್ತು ಅಂತ್ಯವನ್ನು, ಬಾಹ್ಯ ಮತ್ತು ಆಂತರ್ಯವನ್ನು ಮತ್ತು

ಸ್ವರ್ಗದ ಅತ್ಯುನ್ನತ ಪದವಿಗಳನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ಓ ಅಲ್ಲಾಹ್! ನನ್ನ ಹೆಸರನ್ನು ಉನ್ನತಗೊಳಿಸ ಬೇಕೆಂದು, ನನ್ನ ಭಾರವನ್ನು ಇಳಿಸಬೇಕೆಂದು, ನನ್ನ ಹೃದಯವನ್ನು ಶುದ್ಧೀಕರಿಸಬೇಕೆಂದು, ನನ್ನ ಗುಹ್ಯಾಂಗವನ್ನು ಸುಶೀಲಗೊಳಿಸಬೇಕೆಂದು, ನನ್ನ ಪಾಪಗಳನ್ನು ಮನ್ನಿಸ ಬೇಕೆಂದು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ಸ್ವರ್ಗದ ಅತ್ಯುನ್ನತ ಪದವಿಗಳನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ಓ ಅಲ್ಲಾಹ್! ನನ್ನ ಆಲಿಸುವಿಕೆಯಲ್ಲಿ, ನನ್ನ ದೃಷ್ಟಿಯಲ್ಲಿ, ನನ್ನ ಸೃಷ್ಟಿಯಲ್ಲಿ, ನನ್ನ ಸ್ವಭಾವದಲ್ಲಿ, ನನ್ನ ಕುಟುಂಬದಲ್ಲಿ, ನನ್ನ ಜೀವನದಲ್ಲಿ, ನನ್ನ ಕರ್ಮದಲ್ಲಿ ನೀನು ಬರ್ಕತ್ತು ನೀಡಬೇಕೆಂದು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ನನ್ನ ಒಳಿತುಗಳನ್ನು ಸ್ವೀಕರಿಸು. ಸ್ವರ್ಗದ ಅತ್ಯುನ್ನತ ಪದವಿಗಳನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ.”

«اللَّهُمَّ إِنِّي أَعُوذُ بِكَ مِنْ جَهْدِ الْبَلَاءِ، وَدَرَكِ الشَّقَاءِ، وَسُوءِ الْقَضَاءِ، وَشَمَاتَةِ الْأَعْدَاءِ»

(ಅಲ್ಲಾಹುಮ್ಮ ಇನ್ನೀ ಅಊದು ಬಿಕ ಮಿನ್ ಜಹ್ದಿಲ್ ಬಲಾಇ, ವದರಕಿ ಶ್ಯಕಾಇ, ವಸೂಇಲ್ ಕದಾಇ,

ವಶಮಾತತಿಲ್ ಅಅ್‌ದಾಅ್)

"ಓ ಅಲ್ಲಾಹ್! ವಿಪತ್ತುಗಳ ಪ್ರಯಾಸ, ದೌರ್ಭಾಗ್ಯದ ಹಿಡಿತ, ವಿಧಿಯ ಕೆಡುಕು ಮತ್ತು ವೈರಿಗಳ ಅವಹೇಳನದಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ."

«اللَّهُمَّ مُقَلِّبَ الْقُلُوبِ، ثَبِّتْ قَلْبِي عَلَى دِينِكَ، اللَّهُمَّ مُصَرِّفَ الْقُلُوبِ صَرِّفْ قُلُوبَنَا عَلَى طَاعَتِكَ»

(ಅಲ್ಲಾಹುಮ್ಮ ಮುಕಲ್ಲಿಬಲ್ ಕುಲೂಬಿ, ಸಬ್ಬಿತ್ ಕಲ್ಬೀ ಅಲಾ ದೀನಿಕ, ಅಲ್ಲಾಹುಮ್ಮ ಮುಸರ್ರಿಫಲ್ ಕುಲೂಬಿ ಸರ್ರಿಫ್ ಕುಲೂಬನಾ ಅಲಾ ತಾಅತಿಕ್)

"ಓ ಅಲ್ಲಾಹ್! ಹೃದಯಗಳನ್ನು ಬುಡಮೇಲುಗೊಳಿಸುವವನೇ! ನನ್ನ ಹೃದಯವನ್ನು ನಿನ್ನ ಧರ್ಮದಲ್ಲಿ ಸ್ಥಿರವಾಗಿಡು. ಓ ಅಲ್ಲಾಹ್! ಹೃದಯಗಳನ್ನು ಬದಲಾಯಿಸುವವನೇ! ನಮ್ಮ ಹೃದಯಗಳನ್ನು ನಿನ್ನ ಅನುಸರಣೆಯೆಡೆಗೆ ಬದಲಾಯಿಸು."

«اللَّهُمَّ زِدْنَا وَلَا تَنْقُصْنَا، وَأَكْرِمْنَا وَلَا تُهِنَّا،

وَأَعْطِنَا وَلَا تَحْرِمْنَا، وَآثِرْنَا وَلَا تُؤْثِرْ عَلَيْنَا»

(ಅಲ್ಲಾಹುಮ್ಮ ಝಿದ್‌ನಾ ವಲಾ ತನ್ಕುಸ್‌ನಾ, ವಅಕ್ರಿಮ್‌ನಾ ವಲಾ ತುಹಿನ್ನಾ, ವಅಅ್‌ತಿನಾ ವಲಾ ತಹ್ರಿಮ್‌ನಾ, ವಆಸಿರ್‌ನಾ ವಲಾ ತುಅ್‌ಸಿರ್ ಅಲೈನಾ)

"ಓ ಅಲ್ಲಾಹ್! ನಮಗೆ ಹೆಚ್ಚಿಸಿ ಕೊಡು, ಕಮ್ಮಿ ಮಾಡದಿರು. ನಮ್ಮನ್ನು ಗೌರವಿಸು, ಅಪಮಾನಿಸದಿರು. ನಮಗೆ ದಯಪಾಲಿಸು, ತಡೆಯದಿರು. ನಮಗೆ ಆದ್ಯತೆ ನೀಡು, ನಮಗೆದುರಾಗಿ ಯಾರಿಗೂ ಆದ್ಯತೆ ನೀಡದಿರು."

«اللَّهُمَّ أَحْسِنْ عَاقِبَتَنَا فِي الْأُمُورِ كُلِّهَا، وَأَجِرْنَا مِنْ خِزْيِ الدُّنْيَا وَعَذَابِ الْآخِرَةِ»

(ಅಲ್ಲಾಹುಮ್ಮ ಅಹ್ಸಿನ್ ಆಕಿಬತನಾ ಫಿಲ್ ಉಮೂರಿ ಕುಲ್ಲಿಹಾ, ವಅಜಿರ್‌ನಾ ಮಿನ್ ಖಿಝ್ಯಿ ದ್ದುನ್ಯಾ ವಅದಾಬಿಲ್ ಆಖಿರಃ)

"ಓ ಅಲ್ಲಾಹ್! ಎಲ್ಲ ವಿಷಯಗಳಲ್ಲೂ ನಮ್ಮ ಕೊನೆಯನ್ನು ಉತ್ತಮಗೊಳಿಸು. ಐಹಿಕ ಅವಮಾನದಿಂದ ಮತ್ತು ಪಾರಲೌಕಿಕ ಶಿಕ್ಷೆಯಿಂದ ನಮ್ಮನ್ನು ಪಾರುಮಾಡು."

«اللَّهُمَّ اقْسِمْ لَنَا مِنْ خَشْيَتِكَ مَا تَحُولُ بِهِ بَيْنَنَا وَبَيْنَ مَعْصِيَتِكَ، وَمِنْ طَاعَتِكَ مَا تُبَلِّغُنَا بِهِ جَنَّتَكَ، وَمِنَ الْيَقِينِ مَا تُهَوِّنُ بِهِ عَلَيْنَا مَصَائِبَ الدُّنْيَا، وَمَتِّعْنَا بِأَسْمَاعِنَا وَأَبْصَارِنَا وَقُوَّاتِنَا مَا أَحْيَيْتَنَا، وَاجْعَلْهَا الْوَارِثَ مِنَّا، وَاجْعَلْ ثَأْرَنَا عَلَى مَنْ ظَلَمَنَا، وَانْصُرْنَا عَلَى مَنْ عَادَانَا، وَلَا تَجْعَلِ الدُّنْيَا أَكْبَرَ هَمِّنَا، وَلَا مَبْلَغَ عِلْمِنَا، وَلَا تَجْعَلْ مُصِيبَتَنَا فِي دِينِنَا، وَلَا تُسَلِّطْ عَلَيْنَا مَنْ لَا يَخَافُكَ وَلَا يَرْحَمُنَا»

**(ಅಲ್ಲಾಹುಮ್ಮಕ್ಸಿಮ್ ಲನಾ ಮಿನ್ ಖಶ್ಯತಿಕ ಮಾ ತಹೂಲು ಬಿಹೀ ಬೈನನಾ ವಬೈನ ಮಅ್ಸಿಯತಿಕ, ವಮಿನ್ ತಾಅತಿಕ ಮಾ ತುಬಲ್ಲಿಗುನಾ ಬಿಹೀ ಜನ್ನತಕ, ವಮಿನಲ್ ಯಕೀನಿ ಮಾ ತುಹವ್ವಿನು ಬಿಹೀ ಅಲೈನಾ ಮಸಾಇಬ**

ದ್ದುನ್ಯಾ, ವಮತ್ತಿಅ್‌ನಾ ಬಿಅಸ್ಮಾಇನಾ ವಅಬ್ಸಾರಿನಾ ವಕುವ್ವಾತಿನಾ ಮಾ ಅಹ್ಯಯ್ತನಾ, ವಜ್‌ಅಲ್‌ಹಲ್ ವಾರಿಸ ಮಿನ್ನಾ, ವಜ್‌ಅಲ್ ಸಅ್‌ರನಾ ಅಲಾ ಮನ್ ದಲಮನಾ, ವನ್ಸುರ್‌ನಾ ಅಲಾ ಮನ್ ಆದಾನಾ, ವಲಾ ತಜ್‌ಅಲಿ ದ್ದುನ್ಯಾ ಅಕ್ಬರ ಹಮ್ಮಿನಾ, ವಲಾ ಮಬ್ಲಗ ಇಲ್ಮಿನಾ, ವಲಾ ತಜ್‌ಅಲ್ ಮುಸೀಬತನಾ ಫೀ ದೀನಿನಾ, ವಲಾ ತುಸಲ್ಲಿತ್ ಅಲೈನಾ ಮನ್ ಲಾ ಯಖಾಫುಕ ವಲಾ ಯರ್‌ಹಮುನಾ)

"ಓ ಅಲ್ಲಾಹ್! ನಮ್ಮ ಮತ್ತು ನಿನ್ನನ್ನು ಧಿಕ್ಕರಿಸುವುದರ ನಡುವೆ ಪರದೆಯಾಗುವಂತಹ ಭಯಭಕ್ತಿಯನ್ನು ನಮಗೆ ದಯಪಾಲಿಸು. ನಿನ್ನ ಸ್ವರ್ಗವನ್ನು ನಮಗೆ ತಲುಪಿಸಿಕೊಡುವ ನಿನ್ನ ಅನುಸರಣೆಯನ್ನು ನಮಗೆ ದಯಪಾಲಿಸು, ಐಹಿಕ ಕಷ್ಟಗಳನ್ನು ಸುಲಭೀಕರಿಸುವ ದೃಢಚಿತ್ತವನ್ನು ನಮಗೆ ದಯಪಾಲಿಸು. ನೀನು ನಮ್ಮನ್ನು ಜೀವಂತವಾಗಿಡುವ ಕಾಲದವರೆಗೂ ನಮ್ಮ ಆಲಿಸುವಿಕೆ, ದೃಷ್ಟಿ ಮತ್ತು ಶಕ್ತಿಗಳನ್ನು ನಾವು ಆಸ್ವಾದಿಸುವಂತೆ ಮಾಡು. ಅದನ್ನು ನಮ್ಮಿಂದಿರುವ ವಾರೀಸನ್ನಾಗಿ ಮಾಡು. ನಮ್ಮನ್ನು ಅಕ್ರಮಿಸುವವರ ವಿರುದ್ಧ ನಾವು ಪ್ರತೀಕಾರವೆಸಗುವಂತೆ ಮಾಡು. ನಮ್ಮೊಂದಿಗೆ ಶತ್ರುತ್ವ ತೋರುವವರ ವಿರುದ್ಧ ನಮಗೆ ಸಹಾಯ ಮಾಡು. ಇಹಲೋಕವನ್ನು ನಮ್ಮ ಅತಿದೊಡ್ಡ ಉದ್ದೇಶವಾಗುವಂತೆ

ಮಾಡದಿರು. ನಮ್ಮ ಧರ್ಮದಲ್ಲಿ ನಮಗೆ ಆಪತ್ತು ಎರಗದಂತೆ ಮಾಡು. ನಿನ್ನನ್ನು ಭಯಪಡದ ಮತ್ತು ನಮ್ಮ ಮೇಲೆ ಕರುಣೆತೋರದವರನ್ನು ನಮ್ಮ ಮೇಲಿನ ಅಧಿಕಾರಿಗಳನ್ನಾಗಿ ಮಾಡದಿರು.”

«اللَّهُمَّ إِنِّي أَسْأَلُكَ مُوجِبَاتِ رَحْمَتِكَ، وَعَزَائِمَ مَغْفِرَتِكَ، وَالْغَنِيمَةَ مِنْ كُلِّ بِرٍّ، وَالسَّلَامَةَ مِنْ كُلِّ إِثْمٍ، وَالْفَوْزَ بِالْجَنَّةِ، وَالنَّجَاةَ مِنَ النَّارِ»

(ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಮೂಜಿಬಾತಿ ರಹ್ಮತಿಕ, ವಅಝಾಇಮ ಮಗ್ಫಿರತಿಕ, ವಲ್ ಗನೀಮತ ಮಿನ್ ಕುಲ್ಲಿ ಬಿರ್ರಿನ್, ವಸ್ಸಲಾಮತ ಮಿನ್ ಕುಲ್ಲಿ ಇಸ್ಮಿನ್, ವಲ್ ಫೌಝು ಬಿಲ್ ಜನ್ನತಿ ವನ್ನಜಾತ ಮಿನ ನ್ನಾರ್)

“ಓ ಅಲ್ಲಾಹ್! ನಿನ್ನ ಕರುಣೆ, ಕ್ಷಮೆ, ಸತ್ಕರ್ಮಕ್ಕೆ ಪ್ರತಿಫಲ, ಪಾಪಗಳಿಂದ ಮುಕ್ತಿ, ಸ್ವರ್ಗಪ್ರಾಪ್ತಿ ಮತ್ತು ನರಕ ಮುಕ್ತಿಯನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ.”

«اللَّهُمَّ لَا تَدَعْ لَنَا ذَنْبًا إِلَّا غَفَرْتَهُ، وَلَا عَيْبًا

إِلَّا سَتَرْتَهُ، وَلَا هَمًّا إِلَّا فَرَّجْتَهُ، وَلَا دَيْنًا إِلَّا قَضَيْتَهُ، وَلَا حَاجَةً مِنْ حَوَائِجِ الدُّنْيَا وَالْآخِرَةِ هِيَ لَكَ رِضًى وَلَنَا فِيهَا صَلَاحٌ إِلَّا قَضَيْتَهَا يَا أَرْحَمَ الرَّاحِمِينَ»

(ಅಲ್ಲಾಹುಮ್ಮ ಲಾ ತದಅ್ ಲನಾ ದಮ್ಬನ್ ಇಲ್ಲಾ ಗಫರ್ತಹೂ, ವಲಾ ಐಬನ್ ಇಲ್ಲಾ ಸತರ್ತಹೂ, ವಲಾ ಹಮ್ಮನ್ ಇಲ್ಲಾ ಫರ್‍ರಜ್ತಹೂ, ವಲಾ ದೈನನ್ ಇಲ್ಲಾ ಕದಯ್ತಹೂ, ವಲಾ ಹಾಜತನ್ ಮಿನ್ ಹವಾಇಜಿ ದ್ದುನ್ಯಾ ವಲ್ ಆಖಿರತಿ ಹಿಯ ಲಕ ರಿದನ್ ವಲನಾ ಫೀಹಾ ಸಲಾಹುನ್ ಇಲ್ಲಾ ಕದಯ್ತಹಾ ಯಾ ಅರ್ಹಮ ರ್‍ರಾಹಿಮೀನ್)

"ಓ ಅಲ್ಲಾಹ್! ನಮ್ಮ ಒಂದೇ ಒಂದು ಪಾಪವನ್ನೂ ನೀನು ಕ್ಷಮಿಸದೆ ಬಿಡದಿರು, ನ್ಯೂನತೆಯನ್ನು ಮರೆಮಾಚದೆ ಬಿಡದಿರು, ದುಃಖವನ್ನು ನಿವಾರಣೆಗೊಳಿಸದೆ ಬಿಡದಿರು, ಸಾಲವನ್ನು ಸಂದಾಯ ಮಾಡದೆ ಬಿಡದಿರು, ಐಹಿಕ ಮತ್ತು ಪಾರಲೌಕಿಕ ಬಯಕೆಗಳಲ್ಲಿ ಸೇರಿದ, ನೀನು ತೃಪ್ತಿಪಡುವ ಮತ್ತು

ನಮಗೆ ಉತ್ತಮವಾಗಿರುವ ಯಾವೊಂದು ಬಯಕೆಯನ್ನೂ ನಮಗೆ ವಿಧಿಸದೆ ಬಿಡದಿರು. ಓ ಕರುಣೆ ತೋರುವವರ ಪೈಕಿ ಅತ್ಯಂತ ಕರುಣೆ ತೋರುವವನೇ!"

«اللَّهُمَّ إِنِّي أَسْأَلُكَ رَحْمَةً مِنْ عِنْدِكَ، تَهْدِي بِهَا قَلْبِي، وَتَجْمَعُ بِهَا أَمْرِي، وَتَلُمُّ بِهَا شَعْثِي، وَتَحْفَظُ بِهَا غَائِبِي، وَتَرْفَعُ بِهَا شَاهِدِي، وَتُبَيِّضُ بِهَا وَجْهِي، وَتُزَكِّي بِهَا عَمَلِي، وَتُلْهِمُنِي بِهَا رُشْدِي، وَتَرُدُّ بِهَا الْفِتَنَ عَنِّي، وَتَعْصِمُنِي بِهَا مِنْ كُلِّ سُوءٍ»

(ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ರಹ್ಮತನ್ ಮಿನ್ ಇಂದಿಕ, ತಹ್ದೀ ಬಿಹಾ ಕಲ್ಬೀ, ವತಜ್‌ಮಉ ಬಿಹಾ ಅಮ್ರೀ, ವತಲುಮ್ಮು ಬಿಹಾ ಶಅ್‌ಸೀ, ವತಹ್ಫದು ಬಿಹಾ ಗಾಇಬೀ, ವತರ್ಫಉ ಬಿಹಾ ಶಾಹಿದೀ, ವತುಬಯ್ಯಿದು ಬಿಹಾ ವಜ್‌ಹೀ, ವತುಝಕ್ಕೀ ಬಿಹಾ ಅಮಲೀ, ವತುಲ್‌ಹಿಮುನೀ ಬಿಹಾ ರುಶ್ದೀ, ವತುರದ್ದು ಬಿಹಲ್ ಫಿತನ ಅನ್ನೀ, ವತಅ್‌ಸಿಮುನೀ ಬಿಹಾ ಮಿನ್ ಕುಲ್ಲಿ ಸೂಅ್)

"ಓ ಅಲ್ಲಾಹ್! ಯಾವ ಕರುಣೆಯ ಮೂಲಕ ನೀನು ನನ್ನ ಹೃದಯವನ್ನು ಮುನ್ನಡೆಸುವೆಯೋ, ನನ್ನ ಕಾರ್ಯಗಳನ್ನು ಜೊತೆಗೂಡಿಸುವೆಯೋ, ನನ್ನ ದುಃಖಗಳನ್ನು ನಿವಾರಿಸು ವೆಯೋ, ನನ್ನ ಅನುಪಸ್ಥಿತಿಯನ್ನು ಸಂರಕ್ಷಿಸುವೆಯೋ, ನನ್ನ ಉಪಸ್ಥಿತಿಯನ್ನು ಉನ್ನತಗೊಳಿಸುವೆಯೋ, ನನ್ನ ಮುಖವನ್ನು ಬೆಳ್ಳಗಾಗಿಸುವೆಯೋ, ನನ್ನ ಕರ್ಮವನ್ನು ಶುದ್ಧೀಕರಿಸುವೆಯೋ, ನನ್ನ ಮಾರ್ಗದರ್ಶನವನ್ನು ತೋರಿಸಿ ಕೊಡುವೆಯೋ, ನನ್ನಿಂದ ಪರೀಕ್ಷೆಗಳನ್ನು ನಿವಾರಿಸುವೆಯೋ, ಎಲ್ಲ ಕೆಡುಕಿನಿಂದಲೂ ನನ್ನನ್ನು ರಕ್ಷಿಸುವೆಯೋ ನಿನ್ನ ವತಿಯ ಆ ಕರುಣೆಯನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ."

«اللَّهُمَّ إِنِّي أَسْأَلُكَ الْفَوْزَ يَوْمَ الْقَضَاءِ، وَعَيْشَ السُّعَدَاءِ، وَمَنْزِلَ الشُّهَدَاءِ، وَمُرَافَقَةَ الْأَنْبِيَاءِ، وَالنَّصْرَ عَلَى الْأَعْدَاءِ»

(ಅಲ್ಲಾಹುಮ್ಮ ಇನ್ನೀ ಅಸ್‌ಅಲುಕಲ್ ಫೌಝ ಯೌಮಲ್ ಕದಾಇ, ವಐಶ ಸ್ಸುಅದಾಇ, ವಮಂಝಿಲ ಶ್ಶುಹದಾಇ, ವಮುರಾಫಕತಲ್ ಅಂಬಿಯಾಇ, ವನ್ನಸ್ರ ಅಲಲ್ ಅಅ್‌ದಾಅ್)

"ಓ ಅಲ್ಲಾಹ್! ವಿಚಾರಣಾ ದಿನದ ವಿಜಯ, ಸೌಭಾಗ್ಯ ಶಾಲಿಗಳ ಜೀವನ, ಹುತಾತ್ಮರ ಪದವಿ, ಪ್ರವಾದಿಗಳ ಸಹ ವಾಸ ಮತ್ತು ವೈರಿಗಳಿಗೆ ವಿರುದ್ಧ ಸಹಾಯವನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ."

«اللَّهُمَّ إِنِّي أَسْأَلُكَ صِحَّةً فِي إِيمَانٍ، وَإِيمَانًا فِي حُسْنِ خُلُقٍ، وَنَجَاحًا يَتْبَعُهُ فَلَاحٌ، وَرَحْمَةً مِنْكَ وَعَافِيَةً مِنْكَ وَمَغْفِرَةً مِنْكَ وَرِضْوَانًا»

(ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಸಿಹ್ಹತನ್ ಫೀ ಈಮಾನಿನ್, ವಈಮಾನನ್ ಫೀ ಹುಸ್ನಿ ಖುಲುಕಿನ್, ವನಜಾಹನ್ ಯತ್‌ಬಉಹೂ ಫಲಾಹುನ್, ವರಹ್ಮತನ್ ಮಿನ್ಕ ವಆಫಿಯತನ್ ಮಿನ್ಕ ವಮುಗ್ಫಿರತನ್ ಮಿನ್ಕ ವರಿದ್ವಾನಾ)

"ಓ ಅಲ್ಲಾಹ್! ವಿಶ್ವಾಸದಲ್ಲಿ ನಿಖರತೆಯನ್ನು, ಸತ್‌ಸ್ವಭಾವದಲ್ಲಿ ವಿಶ್ವಾಸವನ್ನು, ಯಶಸ್ಸು ಹಿಂಬಾಲಿಸುವ ವಿಜಯವನ್ನು, ನಿನ್ನ ವತಿಯ ಕರುಣೆಯನ್ನು, ನಿನ್ನ ವತಿಯ ಸೌಖ್ಯವನ್ನು, ನಿನ್ನ ವತಿಯ ಪಾಪಮುಕ್ತಿ ಮತ್ತು ತೃಪ್ತಿಯನ್ನು

ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ.”

«اللَّهُمَّ إِنِّي أَسْأَلُكَ الصِّحَّةَ وَالْعِفَّةَ، وَحُسْنَ الْخُلُقِ وَالرِّضَاءَ بِالْقَدَرِ، اللَّهُمَّ إِنِّي أَعُوذُ بِكَ مِنْ شَرِّ نَفْسِي، وَمِنْ شَرِّ كُلِّ دَابَّةٍ أَنْتَ آخِذٌ بِنَاصِيَتِهَا إِنَّ رَبِّي عَلَى صِرَاطٍ مُسْتَقِيمٍ»

(ಅಲ್ಲಾಹುಮ್ಮ ಇನ್ನೀ ಅಸ್‌ಅಲುಕ ಸ್ಸಿಹ್ಹತ ವಲ್ ಇಫತ, ವಹುಸ್ನಲ್ ಖುಲುಕಿ ವರ್ರಿದಾಅ ಬಿಲ್ ಕದರಿ, ಅಲ್ಲಾಹುಮ್ಮ ಇನ್ನೀ ಅಊದುಬಿಕ ಮಿನ್ ಶರ್ರಿ ನಫ್ಸೀ, ವಮಿನ್ ಶರ್ರಿ ಕುಲ್ಲಿ ದಾಬ್ಬತಿನ್ ಅನ್ತ ಆಖಿದುನ್ ಬಿನಾಸಿಯತಿಹಾ ಇನ್ನ ರಬ್ಬೀ ಅಲಾ ಸಿರಾತಿನ್ ಮುಸ್ತಕೀಮ್)

“ಓ ಅಲ್ಲಾಹ್! ಆರೋಗ್ಯ, ಏಕಾಗ್ರತೆ, ಸತ್‌ಸ್ವಭಾವ, ವಿಧಿಯಲ್ಲಿ ತೃಪ್ತಿಯನ್ನು ನಾನು ನಿನ್ನೊಂದಿಗೆ ಬೇಡುತ್ತಿದ್ದೇನೆ. ಓ ಅಲ್ಲಾಹ್! ನನ್ನ ಶರೀರದ ಕೆಡುಕಿನಿಂದ ಮತ್ತು ನೀನು ಮುಂಗುರುಳನ್ನು ಹಿಡಿದಿರುವ ಎಲ್ಲ ಜೀವಿಗಳ ಕೆಡುಕಿನಿಂದ ನಾನು ನಿನ್ನೊಂದಿಗೆ ಅಭಯ ಯಾಚಿಸುತ್ತಿದ್ದೇನೆ. ಓ ಪ್ರಭೂ! ನನ್ನನ್ನು ನೇರವಾದ ಮಾರ್ಗದಲ್ಲಿರಿಸು.”

«اللَّهُمَّ إِنَّكَ تَسْمَعُ كَلَامِي، وَتَرَى مَكَانِي، وَتَعْلَمُ سِرِّي وَعَلَانِيَتِي، وَلَا يَخْفَى عَلَيْكَ شَيْءٌ مِنْ أَمْرِي، وَأَنَا الْبَائِسُ الْفَقِيرُ، وَالْمُسْتَغِيثُ الْمُسْتَجِيرُ، وَالْوَجِلُ الْمُشْفِقُ الْمُقِرُّ الْمُعْتَرِفُ إِلَيْكَ بِذَنْبِهِ، أَسْأَلُكَ مَسْأَلَةَ الْمِسْكِينِ، وَأَبْتَهِلُ إِلَيْكَ إِبْتِهَالَ الْمُذْنِبِ الذَّلِيلِ، وَأَدْعُوكَ دُعَاءَ الْخَائِفِ الضَّرِيرِ، دُعَاءَ مَنْ خَضَعَتْ لَكَ رَقَبَتُهُ، وَذَلَّ لَكَ جِسْمُهُ، وَرَغِمَ لَكَ أَنْفُهُ»

(ಅಲ್ಲಾಹುಮ್ಮ ಇನ್ನಕ ತಸ್ಮಉ ಕಲಾಮೀ, ವತರಾ ಮಕಾನೀ, ವತಅ್‌ಲಮು ಸಿರ್ರೀ ವಅಲಾನಿಯತೀ, ವಲಾ ಯಖ್ಫಾ ಅಲೈಕ ಶೈಉನ್ ಮಿನ್ ಅಮ್ರೀ, ವಅನಲ್ ಬಾಇಸುಲ್ ಫಕೀರು, ವಲ್ ಮುಸ್ತಗೀಸುಲ್ ಮುಸ್ತಜೀರು, ವಲ್ ವಜಿಲುಲ್ ಮುಶ್ಫಿಕುಲ್ ಮುಕಿರ್ರುಲ್ ಮುಅ್‌ತರಿಫು ಇಲೈಕ ಬಿದಂಬಿಹೀ, ಅಸ್‌ಅಲುಕ ಮಸ್‌ಅಲತಲ್ ಮಿಸ್ಕೀನಿ,

ವಅಬ್ತಹಿಲು ಇಲೈಕ ಇಬ್ತಿಹಾಲಲ್ ಮುದ್ನಿಬಿ ದ್ದಲೀಲಿ, ವಅದ್‌ಊಕ ದುಆಅಲ್ ಖಾಇಫಿ ದ್ದರೀರಿ, ದುಆಅ ಮನ್ ಖದಅತ್ ಲಕ ರಕಬತುಹೂ, ವದಲ್ಲ ಲಕ ಜಿಸ್ಮುಹೂ, ವರಗಿಮ ಲಕ ಅನ್ಫುಹೂ)

"ಓ ಅಲ್ಲಾಹ್! ನೀನು ನನ್ನ ಮಾತನ್ನು ಆಲಿಸುತ್ತಿರುವೆ, ನನ್ನ ಸ್ಥಿತಿಯನ್ನು ಕಾಣುತ್ತಿರುವೆ, ನನ್ನ ಗೌಪ್ಯ ಮತ್ತು ಬಹಿರಂಗವನ್ನು ಅರಿಯುತ್ತಿರುವೆ, ನನ್ನ ಕಾರ್ಯಗಳ ಪೈಕಿ ಏನೊಂದೂ ನಿನ್ನಿಂದ ಮರೆಯಾಗಿಲ್ಲ. ತನ್ನ ಪಾಪಗಳೊಂದಿಗೆ ಭಯಪಡುತ್ತಾ ನಿನ್ನತ್ತ ಮರಳಿದ ನಿನ್ನ ಸಹಾಯ ಸಂರಕ್ಷಣೆ-ಯ ಅಗತ್ಯವಿರುವ ಓರ್ವ ಕಂಗಾಲಾದ ನಿರ್ಗತಿಕನಾಗಿರುವೆನು ನಾನು. ದರಿದ್ರನಂತೆ ವಿಧೇಯನಾಗಿ ಭಯಪಡುತ್ತಾ ಶಿರಬಾಗಿ ಶರಣಾಗಿ ನಾನು ನಿನ್ನೊಂದಿಗೆ ಪ್ರಾರ್ಥಿಸುತ್ತಿದ್ದೇನೆ."

وصلى الله على نبينا محمد وآله وصحبه وسلم

## ಕುರ್‌ಆನ್ ಮತ್ತು ಸುನ್ನತ್ ಆಧಾರಿತ ಇಸ್ಲಾಮೀ ಸಾಹಿತ್ಯ ಪುಸ್ತಕಗಳಿಗೆ ಮತ್ತು ಸಿಡಿ/ಡಿವಿಡಿಗಳಿಗೆ

# Manhaj-Al-Ambiya

*Call & Guidance Centre*

Mangalore

*ಇದರ ಈ ಕೆಳಗಿನ ಶಾಖೆಗಳಿಗೆ ಭೇಟಿ ನೀಡಿರಿ:*

## Islamic Studies Centre

Markaz Ibn Taymiyya,
University Road, Deralakatte,
Mangalore
Email : *sksmlibrary@gmail.com*

## CD/DVD & Book Store

Near Ibrahim Khaleel Masjid
Nellikai Road, Mangalore – 575001
Telephone: 824 426 3068
Email : *salafibookstore@gmail.com*

## International Islamic Centre

Basement, Islamic Trust Complex
Hampankatta, Mangalore – 575001
Telephone: 824 425 1606
Email : *iicmanglore@gmail.com*

**ಕುರ್‌ಆನ್ ಮತ್ತು ಸುನ್ನತ್ತನ್ನು ಸಲಫು ಸ್ವಾಲಿಹೀನ್‌ಗಳು ಗ್ರಹಿಸಿದಂತೆ ಕಲಿಸಿಕೊಡುವ ಸಲಫಿ ಮನ್‌ಹಜ್‌ನಲ್ಲಿರುವ ಕನ್ನಡದ ಏಕೈಕ ಪಾಕ್ಷಿಕ**

# ಪವಿತ್ರ ಸಂದೇಶ

*ಓದಿರಿ..... ಪ್ರೋತ್ಸಾಹಿಸಿರಿ...... ಚಂದಾದಾರಾಗಿರಿ.........*

*ಅಂಚೆ ವಿಳಾಸ:*

**ಪವಿತ್ರ ಸಂದೇಶ, ನಂ. ಎ1 2ನೇ ಮಹಡಿ**

**ಪಾಲಿಮಾರ್ ಹೌಸ್, ನೆಲ್ಲಿಕಾಯಿ ರಸ್ತೆ. ಮಂಗಳೂರು – 1**

*mailto : pavithrasandesha@yahoo.co.in*

ಇಸ್ಲಾಮಿನ ಕುರಿತು ಮುಸ್ಲಿಮ್ ಮತ್ತು ಮುಸ್ಲಿಮೇತರ
ಬಾಂಧವರಲ್ಲಿರುವ ತಪ್ಪುಕಲ್ಪನೆಗಳ ನಿವಾರಣೆಗಾಗಿ ಕನ್ನಡದ
ಏಕೈಕ ಮಾಸಿಕ

# ಸತ್ಯ ಸಾರಥಿ

*ಓದಿರಿ..... ಚಂದಾದಾರಾಗಿರಿ.....*

***ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿರಿ:***

**ಪಿ. ಬಿ. ಮುಹಮ್ಮದ್ ಸಾದಿಕ್: 94494 49182**

**ವಿ. ಕೆ. ಹಿದಾಯತುಲ್ಲಾಹ್ : 96328 97299**

***ಅಂಚೆ ವಿಳಾಸ:***

**ಸತ್ಯಸಾರಥಿ ಮಾಸಿಕ**

**ಸಲಫೀ ಕಾಂಪ್ಲೆಕ್ಸ್, ಎ.ಪಿ.ಎಂ.ಸಿ. ರಸ್ತೆ, ಪುತ್ತೂರು –1**

*mailto : satyasarathi2011@gmail.com*